ಲಕ್ಷ್ಮಣ್ ತೆಲಗಾವಿ

# ಚಿತ್ರದುರ್ಗ ಬೆಟ್ಟದ ಪೆರುಮಾಳೆಪುರ : ಮರುಶೋಧನೆ

ಹೊಯ್ಸಳ ಚಕ್ರವರ್ತಿ ಮುಮ್ಮಡಿ ನರಸಿಂಹನು (ಕ್ರಿ.ಶ. ೧೨೬೩–೧೨೯೧) ಚಿತ್ರದುರ್ಗ ಜಿಲ್ಲೆಯಲ್ಲಿಯೂ ತನ್ನ ಆಳ್ವಿಕೆ ನಡೆಸುತ್ತಿದ್ದ ಅವಧಿಯಲ್ಲಿಯೇ ಚಿತ್ರದುರ್ಗ, ಅಂದರೆ ಅಂದಿನ ಬೆ(ಚಿ)ಮ್ಮತ್ತನೂರು ವೃತ್ತಿ ಅಥವಾ ಪಟ್ಟಣದಲ್ಲಿ ಆಗ ಪ್ರಾಂತಾಧಿಕಾರಿ ಅಥವಾ ಮಹಾ ಮಂಡಲೇಶ್ವರನಾಗಿದ್ದವನು ಆತನ ಮಹಾ ಪ್ರಧಾನರಲ್ಲಿ ಒಬ್ಬನಾಗಿದ್ದ ಪೆರುಮಾಳೆದೇವ ದಣ್ಣಾಯಕ. ಈತನು ರಟ್ಟವಂಶ, ಐತ್ರೇಯ ಗೋತ್ರದ ಬ್ರಾಹ್ಮಣ. ಈತನ ತಂದೆ ವಿಷ್ಣುದೇವ. ಸ್ವಾಮಿ ವಂಚಕರಗಂಡ, ರಾವುತ್ತರಾಯ, ಜವನಿಕೆ ನಾರಾಯಣ ಇತ್ಯಾದಿ ಅಭಿಧಾನಗಳಿಂದ ಕೂಡಿ, ಶ್ರೀರಾಮಕೃಷ್ಣಪಾದ ಪದ್ಮಾರಾಧಕನೆನಿಸಿ ಈ ಪೆರುಮಾಳೆದೇವನು ಶೋಭಿಸಿದ್ದಾನೆ. ಶೂರನೂ ಧರ್ಮನಿಷ್ಠನೂ ವಿದ್ಯಾಪಕ್ಷಪಾತಿಯೂ ಪ್ರಜಾಹಿತಕಾರ್ಯಗಳಲ್ಲಿ ಆಸಕ್ತನೂ ಆಗಿದ್ದವನೆಂದು ಸಮಕಾಲೀನ ಶಾಸನಗಳು ಈತನನ್ನು ವರ್ಣಿಸುತ್ತವೆ. ಈತನು ಅರಸನಿಗೆ ಪ್ರಿಯನಾದ ವ್ಯಕ್ತಿಯಾಗಿದ್ದು, ಅರಸನಿಂದ ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ಬೆಳ್ಳೂರು ಪಕ್ಕದಲ್ಲಿಯ ಮೂರು ಗ್ರಾಮಗಳನ್ನು ಜಹಗೀರಾಗಿ ಪಡೆದಿದ್ದನೆಂಬುದು ಸಹಾ ಶಾಸನೋಕ್ತ. ಮೈಸೂರು ಜಿಲ್ಲೆಯ ಮಾಲಂಗಿಯಲ್ಲಿ ಕ್ರಿ.ಶ. ೧೨೯೦ರಲ್ಲಿ ವಿದ್ಯಾಲಯವೊಂದನ್ನು ಸ್ಥಾಪಿಸುವುದರೊಡನೆ ಈತನು ತನ್ನ ವಿದ್ಯಾಪಕ್ಷಪಾತವನ್ನು ತೋರಿದ್ದಾನೆ.

ತನ್ನ ಅಧಿಕಾರದ ಅವಧಿಯಲ್ಲಿ ಅಂದಿನ ಚಿತ್ರದುರ್ಗ ಪರಿಸರದಲ್ಲಿಯೂ ಈ ಪೆರುಮಾಳೆದೇವನು ಕೆಲವು ದೇವಾಲಯಗಳಿಗೆ ದತ್ತಿಕೊಡುಗೆ, ಕೆರೆನಿರ್ಮಾಣ, ಬ್ರಹ್ಮಪುರಿ ಸ್ಥಾಪನೆ ಮೊದಲಾದ ಸೇವಾಕಾರ್ಯಗಳನ್ನು ಕೈಗೊಂಡುದೆಂದು, ಇಲ್ಲಿ ದೊರೆತ ಕೆಲವು ಶಿಲಾಶಾಸನ ಇನ್ನಿತರ ಕಲ್ಲುಬರಹಗಳಿಂದ ವ್ಯಕ್ತಪಡುತ್ತದೆ.

ಚಿತ್ರದುರ್ಗ ಬೆಟ್ಟದಲ್ಲಿ ಈತನು ತನ್ನ ಹೆಸರಲ್ಲಿ ಮಾಡಿದ ಪೆರುಮಾಳೆಪುರ ಮತ್ತು ಅಲ್ಲಿ ಸ್ಥಾಪಿಸಿದ ಬ್ರಹ್ಮಪುರಿ, ಇತ್ಯಾದಿಗಳಿಗೆ ಸಂಬಂಧಿಸಿದಂತೆ ಮರುಶೋಧನೆ ಕೈಗೊಂಡು, ಅಲ್ಲಿ ಗಮನಿಸಲಾದ ಕೆಲವು ಸಂಗತಿಗಳನ್ನು ಈ ಪ್ರಬಂಧದಲ್ಲಿ ಹೇಳಲು ಪ್ರಯತ್ನಿಸಿದೆ.

## ೧

ಪೆರುಮಾಳೆದೇವ ದಣ್ಣಾಯಕನು ಹಾಕಿಸಿರುವ ಹಾಗೂ ಆತನ ಅವಧಿಯ ಕೆಲವು ಶಾಸನ ಮತ್ತು ಕಲ್ಲು ಬರಹಗಳ ಸಾರ ಇಂತಿದೆ :

೧. ಲೂಯಿರೈಸ್ ಅವರು ಪ್ರಕಟಿಸಿದ ಶಾಸನಗಳಲ್ಲಿ ಕ್ರಿ. ಶ. ಸು. ೧೨೮೫ರ ಬರಹವು ಚಿತ್ರದುರ್ಗ ಬೆಟ್ಟದ ಗೋಪಾಲಸ್ವಾಮಿ ಹೊಂಡದ ಮೇಲುಭಾಗದ ಹುಟ್ಟುಬಂಡೆಯ ಮೇಲಿದ್ದು, "ಮಹಾಪ್ರಧಾನ ಪೆರುಮಾಳೆದೇವ ದಣ್ಣಾಯಕರು ತಾವು ಪೆರುಮಾಳೆಪುರವಾಗಿ ಮಾಡಿದ ಬ್ರಹ್ಮಪುರಿಗಿರಿ" ಎಂದು ಅರಹುತ್ತದೆ.[1] ಇದೇ ಬೆಟ್ಟದ ಹಿಡಂಬೇಶ್ವರ ದೇವಾಲಯದ ಕ್ರಿ. ಶ. ೧೨೮೬ರ

1 *EC.*, XI, Chitradurga 7

ಶಾಸನವು,[2] ನಗರೇರಸೀಮೆಯೊಳಗಣ ಕುರುಬರ ಕಾಳೇಯನ ಕೆರೆಯ ಪ್ರಾಪ್ತಕ್ಕೆ ಉಳ್ಳ ಗದ್ದೆಯನ್ನು ಉಭಯ ದ್ವಾದಶನಾಮಂಗಳಿಂದ (೧೨+೧೨) ಅಂದರೆ ೨೪ ವೃತ್ತಿಯನ್ನಾಗಿ ಮಾಡಿ, ಬೆಮ್ಮತ್ತನೂರದುರ್ಗದ ಹೂಲಿಯಬಾವಿಯಲ್ಲಿ ತಾನು ಮಾಡಿದ ಪೆರುಮಾಳೆಪುರದ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಹಾಗೂ ಹಿಡಿಂಬೇಶ್ವರ, ಚೋಳೇಶ್ವರ ದೇವರುಗಳು ಮತ್ತು ಕೆಲವು ವ್ಯಕ್ತಿಗಳಿಗೆ ಧಾರಾಪೂರ್ವಕವಾಗಿ ಕೊಟ್ಟುದನ್ನೂ ಹಾಗೆಯೇ ಈ ಪೆರುಮಾಳೆದೇವನು ಕುರುಬನಕಾಳೆಯನ ಕೆರೆಯನ್ನು ಕ್ರಯವಾಗಿ ಕೊಂಡು ತನ್ನ ಹೆಸರಿನಲ್ಲಿ 'ಪೆರುಮಾಳೆ ಸಮುದ್ರ'ವೆಂದು ಅದನ್ನು ಹೊಸದಾಗಿ ಕಟ್ಟಿಸಿ, ಪೆರುಮಾಳೆಪುರದಲ್ಲಿ ನಡೆಸುವ ಪಂಚಕೇಶ್ವರದ ಯಿಂದ್ರ ಪರ್ವ್ವದ ಧರ್ಮಕ್ಕೆ ಅದನ್ನು ಸರ್ವಮಾನ್ಯವಾಗಿ ಬಿಟ್ಟುಕೊಟ್ಟುದನ್ನೂ ಹೇಳುತ್ತದೆ. ಇದೇ ಬೆಟ್ಟದ ಪಶ್ಚಿಮ ದಿಕ್ಕಿನಲ್ಲಿರುವ ಅಂಕಲಿಮಠದ ಪಂಚಲಿಂಗೇಶ್ವರ ದೇವಾಲಯದಲ್ಲಿರುವ ಅದೇ ಅವಧಿಯ (ಕ್ರಿ. ಶ. ೧೨೮೬) ಇನ್ನೊಂದು ಶಾಸನವು,[3] ಇಲ್ಲಿಯ ಪಂಚಲಿಂಗದೇವರೊಳಗಾದ ದೇವರುಗಳಿಗೆ ಪೂಜೆ, ಉತ್ಸವಾದಿಗಳಿಗೂ ಪೆರುಮಾಳೆದೇವನು ಎಸಗೂರು ಕ್ಷೇತ್ರವನ್ನು ದತ್ತಿಕೊಟ್ಟುದನ್ನು ತಿಳಿಸುತ್ತದೆ.

೨. ಚಿತ್ರದುರ್ಗ ಬೆಟ್ಟದ ಪೂರ್ವಕ್ಕೆ ರಾಮದೇವರ ಸುತ್ತಿನಕೋಟೆಯು ಆವರಿಸಿದ್ದು, ಅದರ ಪಕ್ಕದಲ್ಲಿರುವ ರಾಮದೇವರ ಒಡ್ಡಿಗೆ ಹೊಂದಿಕೊಂಡಂತೆ ಬೃಹತ್ ಬಂಡೆಯ ಅಡಿಯಲ್ಲಿ ಹುಟ್ಟುಬಂಡೆಯ ಮೇಲೆ ಕೆತ್ತಲಾದ ಪೆರುಮಾಳೆದೇವನ ಕ್ರಿ.ಶ. ೧೨೮೬ರ ಇನ್ನೊಂದು ಶಾಸನ ಪಾಠದ ಇಂಗ್ಲಿಷ್ ಸಾರಾಂಶವನ್ನು ಆರ್. ನರಸಿಂಹಾಚಾರ್ ಅವರು ಪ್ರಕಟಿಸಿರುವರು.[4]

೩. ಡಾ|| ಎಂ. ಎಚ್. ಕೃಷ್ಣ ಅವರು, ಲೂಯಿ ರೈಸ್ ಅವರು ಪ್ರಕಟಿಸಿದ ಶಾಸನದಲ್ಲಿಯ (ಚಿ. ೧೨) ಅಂಶವನ್ನು ಸಮರ್ಥಿಸುವ, ಅಂದರೆ ಬೆಮ್ಮತ್ತನೂರ ಹೂಲಿಯಬಾವಿಯಲ್ಲಿ ಪೆರುಮಾಳೆದೇವನು ಮಾಡಿದ ಪೆರುಮಾಳೆಪುರದ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಕೊಟ್ಟ ಗದ್ದೆಯ ವಿಚಾರವನ್ನು ಪುಷ್ಟೀಕರಿಸುವ ಬರಹವುಳ್ಳ ಕಲ್ಲೊಂದನ್ನು ಚಿತ್ರದುರ್ಗದ ಗೋಪಾಲಪುರ ಮತ್ತು ಮದೇಹಳ್ಳಿಗಳ ಗಡಿಯಲ್ಲಿ ಶೋಧಿಸಿ ಪ್ರಕಟಿಸಿರುವರು.[5]

೪. ಪೆರುಮಾಳೆದೇವನು ಚಿತ್ರದುರ್ಗ ಬೆಟ್ಟದ ಬಂಡೆಯ ಮೇಲೆ ಬರೆಯಿಸಿದ ಬ್ರಹ್ಮಪುರಿಗೇರಿಯ ಸೂಚನೆಯುಳ್ಳ ಬರಹದ ಇನ್ನೊಂದು ಪಾಠವನ್ನೂ ಅರಕೆರೆವೊಳಗಣ ಶ್ರೀರಾಮನಾಥದೇವರಿಗೆ ಕ್ಷೇತ್ರವನ್ನು ಕೊಟ್ಟ, ಪಂಚಕೇಶ್ವರಕ್ಕಾಗಿ ಭೂಮಿಯನ್ನು ದಾನ ಮಾಡಿದ ಹಾಗೂ ಇಂದಿನ ಬರಗೆರೆ ಎಂಬುದೇ ಹಿಂದಿನ ಪೆರುಮಾಳೆಸಮುದ್ರವೆಂದು ದಾಖಲಿಸಿದ ಇನ್ನಿತರ ಬರಹಗಳನ್ನೂ ಬಿ. ರಾಜಶೇಖರಪ್ಪ ಅವರು ಚಿತ್ರದುರ್ಗದ ಸುತ್ತಮುತ್ತಲಲ್ಲಿ ಈಚೆಗೆ ಶೋಧಿಸಿರುವರು.[6]

೫. ಪೆರುಮಾಳೆದೇವನ ಅವಧಿಯದೇ ಆದ, ಚಿತ್ರದುರ್ಗ ಬೆಟ್ಟದ ಸಿದ್ಧ (ಚಂಪಕ ಸಿದ್ಧೇಶ್ವರ) ದೇವರಿಗೆ ಸೀಮೆಯೊಂದನ್ನು ಧಾರಾಪೂರ್ವಕವಾಗಿ ಕೊಟ್ಟಿರುವ ಸಂಗತಿಯುಳ್ಳ, ಬಂಡೆಶಾಸನ ಪಾಠವನ್ನು ಈ ಲೇಖಕನೂ ಈಚೆಗೆ ಬೆಳಕಿಗೆ ತಂದಿರುವನು.

೨

ಚಿತ್ರದುರ್ಗ ಬೆಟ್ಟದ ಪೆರುಮಾಳೆಪುರವನ್ನು ಹಾಗೂ ಅಲ್ಲಿಯ ಬ್ರಹ್ಮಪುರಿಯನ್ನು ಗುರುತಿಸುವ ದಿಸೆಯಲ್ಲಿ ವಿದ್ವಾಂಸರು ವಿವಿಧ ಅಭಿಪ್ರಾಯಗಳನ್ನೂ ನಿರ್ಣಯಗಳನ್ನೂ ಮಂಡಿಸಿರುವರು. ಲೂಯಿ ರೈಸ್ ಅವರು ಪ್ರಕಟಿಸಿದ ಪೆರುಮಾಳೆದೇವನ ಶಾಸನಪಾಠಗಳನ್ನು ಆಧರಿಸಿ ಡಾ|| ಕೃಷ್ಣ ಅವರು, ೧೩ನೆಯ ಶತ

---

2 *Ibid*., Chitradurga 12
3 *Ibid.*, Chitradurga 32
4 *MAR*.
5 *Ibid.*, 1939, No. 8, pp. 107-108
6 ಪತ್ರಿಕಾ ವರದಿಗಳು

ಮಾನದಲ್ಲಿ, ಅಂದರೆ ಹೊಯ್ಸಳರ ಅವಧಿಯಲ್ಲಿ ಚಿತ್ರದುರ್ಗ ಬೆಟ್ಟವನ್ನು ಬೆಮ್ಮತ್ತನಕಲ್ಲು ಅಥವಾ ಬ್ರಹ್ಮಪುರಿಗಿರಿಯೆಂದು ಕರೆಯಲಾಗುತ್ತಿದ್ದಿತೆಂದೂ ಅನಂತರ ಸ್ವಲ್ಪಕಾಲದವರೆಗೆ ಹೊಯ್ಸಳ ಪ್ರಾಂತಾಧಿಕಾರಿಯಿಂದಾಗಿ ಪೆರುಮಾಳೆಪುರವೆಂದು ಬದಲಾವಣೆಗೊಂಡಿತೆಂದೂ ವ್ಯಕ್ತಪಡಿಸಿರುವರಲ್ಲದೆ,[7] ಗೋಪಾಲಕೃಷ್ಣದೇವರ ಆರಾಧನೆ ಮತ್ತು ದೇವಾಲಯಗಳಿಗೆ ಸಲ್ಲಿಸಬೇಕಾದ ವಿವಿಧ ಸೇವೆಗಳಿಗೆ ಸಂಬಂಧಿಸಿದಂತೆ ಈ ಬ್ರಹ್ಮಪುರಿ ಅಥವಾ ಬ್ರಾಹ್ಮಣರ ವಸತಿಯ ನೆಲೆಯೂ ಸ್ಥಾಪನೆಯಾಗಿರಬೇಕೆಂದೂ ಉಲ್ಲೇಖಿಸಿರುವರು.[8]

ಹುಲ್ಲೂರು ಶ್ರೀನಿವಾಸ ಜೋಯಿಸರು, ಪೆರುಮಾಳೆ ಮಂತ್ರಿಯ ಶಾಸನಗಳಲ್ಲಿ ಶಂಕ–ಚಕ್ರಗಳೂ ವಾಮನಮುದ್ರೆಯೂ ಇರುವುದರಿಂದ ಇವನು ವೈಷ್ಣವನೆಂತಲೂ ಕುರುಬನಕಾಳೆಯ ಕೆರೆಯನ್ನು ತನ್ನ ಹೆಸರಿನಲ್ಲಿ ಪೆರುಮಾಳೆಸಮುದ್ರವೆಂದು ಹೊಸದಾಗಿ ಕಟ್ಟಿಸಿ, 'ಪಂಚಲಿಂಗೇಶ್ವರ' ದೇವರ ಐಂದ್ರಪರ್ವ ಧರ್ಮಕ್ಕೆ ದಾನ ಮಾಡಿದನೆಂತಲೂ ಬೆಮ್ಮತ್ತನೂರಿನ ಮೇಲು ದುರ್ಗದ ಮೇಲೆ ಒಂದು ಬ್ರಹ್ಮಪುರಿಯನ್ನು ನಿರ್ಮಿಸಿ ಅದಕ್ಕೆ ತನ್ನ ಹೆಸರಿನಲ್ಲಿ ಪೆರಮಾಳೆಪುರವೆಂದು ಕರೆದನೆಂತಲೂ[9] ಮೊದಲಿಗೆ ಬರೆದಿದ್ದು, ಅನಂತರದ ತಮ್ಮ ಲೇಖನದಲ್ಲಿ ಈತನ (ಪೆರುಮಾಳೆದೇವನ) ಪೆರುಮಾಳೆಪುರದ ಒಂದು 'ಕೇರಿ'ಯು ಬ್ರಹ್ಮಪುರಿಯಾಯಿತೆಂತಲೂ ಬಹುಶಃ ಈ ಹೊಸ ಪೆರಮಾಳೆಪುರವು ಈಗ (ಸರ್ಕಾರಿ ವಿಜ್ಞಾನ) ಕಾಲೇಜು ಕಟ್ಟಡ ನಿರ್ಮಿತವಾಗಿರುವ ಸ್ಥಳದಲ್ಲಿತ್ತೆಂದು ಊಹಿಸಬಹುದೆಂತಲೂ ಈ ಗುಡ್ಡಕ್ಕೆ ಬುದ್ಧಿಮಂತರ ಮರಡಿ ಎನ್ನುವರೆಂತಲೂ[10] ಬರೆದಿರುವರು. ವಿಲಿಯಂ ಕೊಳಲೊ ಅವರು ಸಹಾ, ಕ್ರಿ.ಶ. ೧೨೮೫ರಲ್ಲಿ ಪೆರುಮಾಳೆದೇವನು ಬ್ರಹ್ಮಪುರಿ ಬೆಟ್ಟವನ್ನು ಪೆರುಮಾಳೆಪುರವೆಂದು ಮಾರ್ಪಡಿಸಿ, ಅಲ್ಲಿ ಬ್ರಾಹ್ಮಣರ ಕೇರಿಯೊಂದನ್ನು ಸ್ಥಾಪಿಸಿದನು ಎಂದಿರುವರು.[11]

ಒಂಡೆ ಬರಹದಲ್ಲಿ (ಚಿ. ೭) ಪ್ರಸ್ತಾಪಗೊಂಡ 'ಬ್ರಹಪುರಿ ಬೆಟ್ಟ'ವು ಈಗಿನ ನೆಲ್ಲಿಕಾಯಿ ಸಿದ್ದಪ್ಪನ ಬೆಟ್ಟವಿರಬಹುದೆಂತಲೂ ಅಭಿಪ್ರಾಯ ಪಟ್ಟಿದ್ದುಂಟು.[12] ಇದೇ ಬರಹದಲ್ಲಿಯ ಕಡೆಯ ಪಂಕ್ತಿಯಲ್ಲಿ ಬರುವ 'ಬ್ರಹ್ಮಪುರಿಗಿರಿ' ಎಂಬುದನ್ನು 'ಬ್ರಹ್ಮಪುರಿಗೇರಿ' ಎಂಬುದಾಗಿ ರಾಜಶೇಖರಪ್ಪ ಅವರು ಈ ಬರಹದ ಮರುಪರಿಶೀಲನೆಯಲ್ಲಿ ಸರಿಪಡಿಸುವುದರ ಮೂಲಕ 'ಬ್ರಹ್ಮಪುರಿಕೇರಿ'ಯ ಅಸ್ತಿತ್ವವನ್ನು ಸಮರ್ಥಿಸಿರುವರು. ಅವರು ಚಿತ್ರದುರ್ಗದ ಹಿಂದಿನ ಅನೇಕ ಹೆಸರುಗಳಲ್ಲಿ ಪೆರುಮಾಳೆಪುರವೆಂಬುದೂ ಒಂದೆಂದು ಹೇಳಲ್ಪಟ್ಟಿರುವುದು ಸರಿಯಲ್ಲವೆಂದೂ ಪೆರುಮಾಳೆ ಮಂತ್ರಿ ಬೆಮ್ಮತ್ತನೂರಿನಲ್ಲಿ ಬ್ರಾಹ್ಮಣರು ವಾಸಿಸುತ್ತಿದ್ದ ಭಾಗಕ್ಕೆ ಅಂದರೆ ಬ್ರಹ್ಮಪುರಿಗೆ ಮಾತ್ರ ಆ ಹೆಸರಿಟ್ಟನೇ ಹೊರತು ಇಡೀ ಬೆಮ್ಮತ್ತನೂರಿಗಲ್ಲವೆಂದೂ ಹೇಳಿರುವರು.[13]

೩

ಚಿತ್ರದುರ್ಗ ಬೆಟ್ಟದ ಮೇಲಿರುವ ಗೋಪಾಲಸ್ವಾಮಿಯ (ಶ್ರೀ ರಾಮಕೃಷ್ಣ ಗೋಪಾಲದೇವರ)[14] ವಿಗ್ರಹವು ಹೊಯ್ಸಳ ಕಲಾಶೈಲಿಯನ್ನು ಹೋಲುತ್ತ

---

7 *MAR.*, 1929, p. 15

8 *Ibid.*, 1939, No. 8, p. 108

9 'ಚಿತ್ರದುರ್ಗದ ಮಾತನಾಡುವ ಕಲ್ಲುಗಳು' , ಸುಬೋಧ (ಮಾಸಿಕ), ೧೯೪೦, ಪು. ೩೫೮

10 'ಚರಿತ್ರಪುರ ಚಿತ್ರದುರ್ಗ', ಕನ್ನಡ ಗುಡಿ (ಮಾಸಿಕ), ೧೯೫೪, ಪು. ೨೨

11 *The Hoysala Vamsha*, Bombay, 1950, p.207

12 ಲಕ್ಷ್ಮಣ್ ತೆಲಗಾವಿ, ಕೆ. ವೆಂಕಣ್ಣಾಚಾರ್ (ಸಂ.) : ಐತಿಹಾಸಿಕ ಚಿತ್ರದುರ್ಗ, ಚಿತ್ರದುರ್ಗ, ೧೯೭೯, ಪು. ೪೬-೪೭ : ಸಂಪಾದಕರ ಅಡಿಟಿಪ್ಪಣಿ

13 i. 'ಚಿತ್ರದುರ್ಗದ ಪ್ರಮುಖ ಶಾಸನಗಳು', ಐತಿಹಾಸಿಕ ಚಿತ್ರದುರ್ಗ, ಪು. ೪೬ ; ii. 'ಶಾಸನಗಳ ಪರಿಶೀಲನೆ : ಒಂದು ತೀವ್ರ ಅಗತ್ಯ', ಹರತಿ ಸಿರಿ (ಹೆಚ್. ವಿ. ವೀರನಾಯಕ ನೆನಪಿನ ಸಂಪುಟ), ಹರ್ತಿಕೋಟೆ, ೧೯೮೭, ಪು. ೬೪೭-೪೮

14 *EC.*, XI Chitradurga 6, 1338 A.D.

ದೆಂದು ಗುರುತಿಸಲಾಗಿದೆ.[15] ಈಗ ಈ ದೇವಾಲಯದ ಮುಂಭಾಗದಲ್ಲಿ ಇರಿಸಲಾಗಿರುವ ಕ್ರಿ. ಶ. ೧೩೩೮ರ ಶಾಸನವು[16] ಹೇಳುವಂತೆ, ಹೊಯ್ಸಳ ಮುಮ್ಮಡಿ ವೀರ ಬಲ್ಲಾಳನ ಮಂತ್ರಿಗಳಲ್ಲೊಬ್ಬನಾಗಿದ್ದ ಹಿರಿಯ ಬಲ್ಲಪ್ಪ ದಣ್ಣಾಯಕನು ಚಿತ್ರದುರ್ಗದಲ್ಲಿ ಪ್ರಾಂತ್ಯಾಧಿಕಾರಿಯಾಗಿದ್ದಾಗ, ನಗರೇರಿಯನ್ನು ಗೋಪಾಲಪುರವಾಗಿ ಮರು ನಾಮಕರಣ ಮಾಡುವುದರೊಂದಿಗೆ ಈ ದೇವಾಲಯಕ್ಕೆ ದಾನ ನೀಡಿದನು. ಆಗ ಈ ದೇವಾಲಯದ ಸ್ಥಾನಿಕನಾಗಿದ್ದವನು 'ನಂಬಿಯಾರು ಗಡಬದೆಯ'. ಈ ವೇಳೆಗಾಗಲೇ ಈ ದೇವಾಲಯದ ಕಟ್ಟಡವು ನಿರ್ಮಾಣಗೊಂಡಿದ್ದಿತೆನ್ನುವುದಕ್ಕೆ ಅನ್ಯತ್ರ ಸೂಚನೆ ದೊರಕುತ್ತದೆ. ಪಾಂಚರಾತ್ರ ಸಂಪ್ರದಾಯದ ಶ್ರೀ ವೈಷ್ಣವ ದೇವಾಲಯಗಳಲ್ಲಿ ಆಳ್ವಾರರ ಸನ್ನಿಧಿಯಿರುವುದು ನಿಯಮವಾದ್ದರಿಂದ ಆಳ್ವಾರರುಗಳ ಶಿಲಾವಿಗ್ರಹಗಳನ್ನು ಇಲ್ಲಿಯೂ ವಿಶಾಲ ನವರಂಗದಲ್ಲಿ ಸ್ಥಾಪಿಸಲಾಗಿದೆ.[17] ಆ ನಂತರ ಇಲ್ಲಿ ಆಳ್ವಿಕೆ ನಡೆಸಿದವರ, ಮುಖ್ಯವಾಗಿ ನಾಯಕ ಅರಸರ ಅವಧಿಯಲ್ಲಿ ಈ ದೇವಾಲಯವನ್ನು ಮರುನಿರ್ಮಾಣಗೊಂಡಿದ್ದಿರಬೇಕು. ಇಲ್ಲಿಯ ಲಕ್ಷಣಗಳಿಂದ ಅದು ಕಾಲಾಂತರದ ಕಟ್ಟಡ ಎನ್ನುವುದು ಖಚಿತಪಡುತ್ತದೆ.[18]

ಗೋಪಾಲಕೃಷ್ಣ ದೇವಾಲಯ ಪರಿಸರವು ಶ್ರೀ ವೈಷ್ಣವ–ವೈಷ್ಣವ ಕ್ಷೇತ್ರವಾಗಿದ್ದಿತೆಂಬುದು ಇಲ್ಲಿಯ ಕೆಲವು ಸ್ಮಾರಕಗಳಿಂದ ದೃಢಪಡುತ್ತದೆ. ಇವುಗಳಲ್ಲಿ ಮುಖ್ಯವಾದುವೆಂದರೆ, ಗರುಡಾಂಜನೇಯ ಬಾಗಿಲು, ಶೃಂಗಾರತೋಟದ ಬಯಲು, ಅರಮನೆ ಆವರಣ, ಸುಬ್ರಹ್ಮಣ್ಯೇಶ್ವರ ದೇವಾಲಯ, ಇತ್ಯಾದಿ. 'ಪೆರುಮಾಳೆಪುರ ವಿಸ್ತರಣ'ವನ್ನು ಗುರುತಿಸುವ ದಿಸೆಯಲ್ಲಿ ಇವು ಮುಖ್ಯಪಾತ್ರವಹಿಸುತ್ತವೆ ಎನ್ನಬಹುದು. ಹಾಗೆಯೇ, ಶಾಸನಗಳಲ್ಲಿ ಪ್ರಸ್ತಾಪಿಸಲ್ಪಟ್ಟಿರುವ ಹೂಲಿಯ ಕೆರೆ–ಹೂಲಿಯ ಬಾವಿಗಳು ಸಹಾ[19] ಈ ಸಂಬಂಧದಲ್ಲಿ ಗಮನಾರ್ಹವಾದುವು.

ಹೊಯ್ಸಳರ ಅವಧಿಯ ಶಾಸನಗಳಲ್ಲಿ ಚಿತ್ರದುರ್ಗಕ್ಕೆ ಸಂಬಂಧಿಸಿದಂತೆ ಕಂಡುಬರುವ ಪ್ರದೇಶ ವಾಚಕಗಳೆಂದರೆ, ಬೆ(ಂ)ಮ್ಮತ್ತೂರಪಟ್ಟಣ (ಕ್ರಿ.ಶ.ಸು. ೧೨೧೪ ; ೧೨೮೬). ಬೆಂಮತ್ತನೂರು (ಕ್ರಿ.ಶ. ೧೨೩೩; ೧೨೮೬) ಹಾಗೂ ಬೆಂಮತ್ತನೂರ ವಿತ್ತಿ, ಬೆಮ್ಮತ್ತನೂರ ದುರ್ಗ (ಕ್ರಿ.ಶ. ೧೨೮೬). ಪೆರುಮಾಳೆದೇವನ ಶಾಸನಗಳಲ್ಲಿ ಚಿತ್ರದುರ್ಗವನ್ನು ಆಯಾ ಸಂದರ್ಭವನ್ನನುಸರಿಸಿ ವೃತ್ತಿ, ಪಟ್ಟಣ ಹಾಗೂ ದುರ್ಗವೆಂದು ಸಂಬೋಧಿಸಲಾಗಿದೆ. ವೃತ್ತಿ ಮತ್ತು ಪಟ್ಟಣಗಳಂತೆ 'ದುರ್ಗ' (ಈಗಿನ ಕೋಟೆಯ ಪ್ರದೇಶ)ವೂ ಪ್ರತ್ಯೇಕ ಆಡಳಿತ ವಿಭಾಗವಾಗಿ ಪರಿಗಣಿಸಲ್ಪಟ್ಟಿದ್ದಿತೆಂದು ಇದರಿಂದ ಸ್ಪಷ್ಟಪಡುತ್ತದೆ.

ಹೂಲಿಯ ಕೆರೆ/ಬಾವಿ : ಕರ್ನಾಟಕದಲ್ಲಿ ಹೂಲಿ/ಹುಲಿ ಆದಿಪ್ರತ್ಯಯವುಳ್ಳ ಹಲವಾರು ಎಡೆಗಳಿವೆ ಉದಾ. : ಹೂಲಿ, ಹೂಲಿಗುಂಡಿ, ಹೂಲಿಯಕೆರೆ, ಹೂಲಿಯ ಕೊಳ, ಹೂಲಿಕಲ್ಲು, ಹೂಲಿಕಟ್ಟೆ, ಹೂಲಿಹಳ್ಳಿ, ಹೂಲಿಕೇರಿ, ಹೂಲಿಗುಡ್ಡ, ಹೂಲಿಕೊತ್ತಳ ; ಹುಲಿಕಲ್ಲು, ಹುಲಿಕಲ್‌ಸ್ಥಳ, ಹುಲಿಯಕಟ್ಟೆ, ಹುಲಿಕಟ್ಟೆ ಗದ್ದೆ, ಹುಲಿ(ಲೆ)ಯ ಕೆರೆ, ಹುಲಿಗೆರೆ, ಹುಲಿಕೇರಿ, ಹುಲಿಕುಂಟೆ, ಹುಲಿಹೊಂಡ, ಹುಲಿಬೆಲೆ, ಹುಲಿಮಂಗಲ, ಹುಲಿಗುಂಡಿ, ಹುಲಿದೊರೆ, ಹುಲಿಕವಿ, ಹುಲಿಗೊಪ್ಪ, ಹುಲಿಕಾಡು, ಹುಲಿವನ, ಹುಲಿಗುಡ್ಡ, ಹುಲಿಹಳ್ಳಿ, ಹುಲಿಕುರ, ಹುಲಿಯಾಪುರ, ಹುಲಿಗೆರೆಪುರ, ಹುಲಿ

---

15 *MAR.*, 1929, p. 21

16 *EC.*, XI, Chitradurga 6

17 ಇಲ್ಲಿರುವ ೧೧ ವಿಗ್ರಹಗಳು : ಪೆರಿಯಾಳ್ವರ್, ತಿರುಮಂಗೈಯಾಳ್ವಾರ್, ಪುದುತ್ತಾಳ್ವಾರ್, ಪೊಯ್‌ಹಯಾಳ್ವಾರ್, ಆಳವಂದಾರ್, ನಾಥಮುನಿ, ಕುಲಶೇಖರಾಳ್ವಾರ್, ತೊಂಡರಾಳ್ವಾರ್, ಭಾಷ್ಯಾಕಾರ, ಮಧುರಕವಿ ಮತ್ತು ನಮ್ಮಾಳ್ವಾರ್

18 ಈ ದೇವಾಲಯದ ನವರಂಗವನ್ನು ಪ್ರವೇಶಿಸಲು ಇರುವ ಕಿರಿದಾದ ಬಾಗಿಲಿನ ಮೇಲೆ ಒಳಮುಖದಲ್ಲಿ, ಗರ್ಭಗುಡಿಗಭಿಮುಖವಾಗಿ ರಾಜಪುರುಷನೋರ್ವನು ಸಾಲ್ವರು ಸ್ತ್ರೀಯರೊಡನೆ ಕೈಜೋಡಿಸಿ ನಿಂತಿರುವ ಶಿಲ್ಪವನ್ನು ಅಳವಡಿಸಲಾಗಿದೆ. ಬಹುಶಃ ಇದು ಈ ದೇವಾಲಯವನ್ನು ವಿಸ್ತರಿಸಿದ ನಾಯಕನೋರ್ವನ ಮತ್ತು ಅವನ ನಾಗತಿಯರ ಶಿಲ್ಪವಿರಬಹುದು.

19 *EC.*, XI, Chitradurga 36, 1199 A.D. ; 23, 1128 A.D. and 12, 1286 A.D. ; *MAR.*, 1939, 8 1286 A.D.

ಯಶಾಳ, ಇತ್ಯಾದಿ. ಇವುಗಳಲ್ಲಿ ಕೆಲವು ಶಾಸನೋಕ್ತ. ಇಲ್ಲಿ ಹೂಲಿ/ಹುಲಿಯೊಡನಿರುವ ಕೆಲವು ಅಂತ್ಯ ಪ್ರತ್ಯಯಗಳು ನಿಸರ್ಗ/ಕೃತಕ ಜಲಾಶಯ ಸೂಚಿಗಳಾಗಿಯೂ ಇನ್ನುಳಿದವುಗಳಲ್ಲಿ ಬಹುಪಾಲು ಊರು, ಸ್ಥಳ ಮೊದಲಾದ ಆಡಳಿತ ವಿಭಾಗ ಸೂಚಿಗಳಾಗಿಯೂ ಇವೆ. ಅಲ್ಲದೆ, ಇಲ್ಲಿಯ ಕೆಲವು ಸ್ಥಳನಾಮಗಳಲ್ಲಿ ಜನಪದರ ಸುಲಭೋಚ್ಚಾರಣೆಯ ಪರಿಣಾಮವಾಗಿ 'ಹೂಲಿ'ಯು 'ಹುಲಿ'ಯಾಗಿರುವ ಸಾಧ್ಯತೆಯೂ ಇಲ್ಲದಿಲ್ಲ.

ಚಿತ್ರದುರ್ಗ ಜಿಲ್ಲೆಯಲ್ಲಿ ಕಂಡುಬರುವ ಇಂತಹ ಕೆಲವು ಸ್ಥಳವಾಚಕಗಳೆಂದರೆ ಹೂಲಿಕುಂಟೆ (ಚಳ್ಳಕೆರೆ), ಹುಲಿಕಟ್ಟೆ(ದಾವಣಗೆರೆ), ಹುಲಿತೊಟ್ಲು(ಹಿರಿಯೂರು), ಹುಲಿಕೆರೆ, ಹುಲೆಮಳಲಿ (ಹೊಳಲ್ಕೆರೆ), ಇತ್ಯಾದಿ. ಚಿತ್ರದುರ್ಗ ತಾಲ್ಲೂಕಿನ ಶಾಸನಗಳಲ್ಲಿ ಉಲ್ಲೇಖಗೊಂಡು ವೆಂದರೆ ಹೂಲಿಯಕೆರೆ (ಚಿ. ೩೬, ಕ್ರಿ. ಶ. ೧೧೯೯), ಹೂಲಿಯಕೆರೆ ಮತ್ತು ಹುಲಿಯಗೊಂದಿ(ಚಿ. ೨೩, ಕ್ರಿ.ಶ. ೧೨೦೫), ಹುಲಿಯಗೊಂದಿ (ಚಿ.೩೨, ಕ್ರಿ.ಶ. ೧೨೮೬), ಹೂಲಿಯಬಾವಿ (ಚಿ. ೧೨ ಮತ್ತು ೮, ಕ್ರಿ.ಶ. ೧೨೮೬).

ಇದೇ ತಾಲ್ಲೂಕಿನ 'ಹುಲಿಗೆರೆ' ಹೆಸರಿನ ಇನ್ನೊಂದು ಗ್ರಾಮವು ಈಗ ಬೇಚಿರಾಕ್ ಎಂದು ಗುರುತಿಸಲ್ಪಟ್ಟಿದೆ.

'ಹೂಲಿ' ಎಂಬುದಕ್ಕೆ ಹೂಲಿಬೆಣ್ಣು. ಎ(ಲ)ಲೆಹೂಲಿ, ಕರೇಹೂಲಿ ಇತ್ಯಾದಿಯಾಗಿ ಸಸ್ಯಮೂಲದ ಇತರ ಪದಗಳನ್ನು ಸೂಚಿಸಿದೆ.[20] ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕಿನ ಹೂಲಿಯ ಮೂಲರೂಪಗಳು–ಶಾಸನಗಳ ಪ್ರಕಾರ ಪೂವಲ್ಲಿ, ಪೂಲಿಗ್ರಾಮ, ಪೂಲಿಪುರ, ಪೂಲಿಅಗ್ರಹಾರ, ಮಹಾಗ್ರಹಾರ ಪೂಲಿ, ಚೂಡಾಮಣಿ ಪೂಲಿ, ಇತ್ಯಾದಿ.[21] 'ಪೂವಲ್ಲಿ' ಎಂಬುದಕ್ಕೆ ಹೂವಿನ ತೋಟ ಅಥವಾ ಊರು ಎಂಬ ಅರ್ಥವಿರಬಹುದೇ? ಈ ಶಬ್ದದ ಹತ್ತಿರದ ರೂಪವೆಂದು ತೋರುವ 'ಹೂವಲಿ' ಎಂಬುದಕ್ಕೆ ರಂಗವಲ್ಲಿ, ಬೈತಲಿನ ಮೇಲೆ ಹಾಕಿಕೊಳ್ಳುವ ಆಭರಣವೆಂತಲೂ ಹೇಳಿದೆ.[22] ಇಲ್ಲಿ ಶೃಂಗಾರ, ಅಲಂಕಾರಗಳಿಗೇ ಸಂಬಂಧಿಸಿದಂತೆ ಸೂಚನೆಯಿದೆ. ಹೂಲಿ(ಪೂವಲ್ಲಿ)ಯು ೧೧-೧೨ನೆಯ ಶತಮಾನದಲ್ಲಿ, ಚಾಲುಕ್ಯರ ಆಳ್ವಿಕೆಯಲ್ಲಿ ಪ್ರಸಿದ್ಧ ಕಾಳಮುಖ ಕ್ಷೇತ್ರವಾಗಿದ್ದಿತು. ಪಂಚಲಿಂಗೇಶ್ವರ ದೇವಾಲಯವೂ ಸೇರಿದಂತೆ ಪ್ರಮುಖ ೧೨ ದೇವಾಲಯಗಳು ಈಗಲೂ ಇಲ್ಲಿ ಕಂಡುಬರುತ್ತವೆ.[23]

---

20 F. Kittel : *A Kannada English Dictionary*, New Delhi, 1983, pp. 280, 376 and 1673

21 Suryanath U. Kamath (Ed.) : *Belgaum District Gazetteer*, Bangalore, 1987, p. 289

22 ಎನ್ಕೆ (ಸಂ.) : ಕುಮಾರವ್ಯಾಸ ನಿಘಂಟು, ಧಾರವಾಡ, ೧೯೭೧, ಪು. ೬೭

23 ಚಿತ್ರದುರ್ಗದ ಹುಲೇಗೊಂದಿಯ ಪಂಚಲಿಂಗದೇವರ ಗುಡಿ ಮತ್ತು ಅದಕ್ಕೆ ಹೊಂದಿಕೊಂಡಿರುವ ಅಂಕಲಿಮಠಗಳನ್ನು ಈ ಸಂಬಂಧದಲ್ಲಿ ಗಮನಿಸಬಹುದು. ಇಲ್ಲಿ ಆಳಿದ ಶಾತವಾಹನರ ಕಾಲದಿಂದ ಮೊದಲಾಗಿ ಈ ಪರಿಸರವು ಬೌದ್ಧ, ಜೈನ, ವೈಷ್ಣವ ಮತ್ತು ಶೈವ ತೀರ್ಥವಾಗಿ ಬೆಳೆದು ಬಂದಂತೆ ತೋರುತ್ತದೆ. ಆಯಾ ಪಂಥಗಳಿಗೆ ಸಂಬಂಧಿಸಿದ ಶಾಸನಗಳೂ ಸ್ಮಾರಕಗಳೂ ಉಳಿದು ಬಂದಿವೆ. ಕಲ್ಯಾಣಿ ಚಾಲುಕ್ಯರ ಕಾಲಕ್ಕೆ ಅಂಕಲಿಮಠವು ವಿದ್ಯಾಕೇಂದ್ರವಾಗಿ ಮಾರ್ಪಟ್ಟಿರಬಹುದು. ಕ್ರಿ.ಶ. ೬-೭ನೆಯ ಶತಮಾನಗಳಿಂದೀಚೆಗೆ ಕರ್ನಾಟಕದಲ್ಲಿ ಲಾಕುಳ ಶೈವವು ಪ್ರಚಾರವಾದ ಬಳಿಕ ದೇವಸ್ಥಾನದ ಅಂಗವಾಗಿ ಮಠಗಳು ಕಾಣಿಸಿಕೊಳ್ಳಲಾರಂಭಿಸಿದ್ದು, ಕ್ರಮೇಣ ಹುಲೇಗೊಂದಿಯ ಪಂಚಲಿಂಗದೇವರ ಗುಡಿಯ ಅಂಗವಾಗಿ ಅಂಕಲಿಮಠವು ಅಸ್ತಿತ್ವಕ್ಕೆ ಬಂದಿರಬಹುದು. ಬಳ್ಳಿಗಾವೆಯ ಪಂಚಲಿಂಗೇಶ್ವರ ದೇವಾಲಯದ ೧೧ನೆಯ ಶತಮಾನದ ಶಾಸನದಲ್ಲೂ ಅಂಕಲಿಮಠದ ಪೆರುಮಾಳೆದೇವನ ಶಾಸನದಲ್ಲಿರುವಂತೆಯೇ ("ಆ ಚಿಂಮತ್ತನೂರ ಹುಲಿಯಗೊಂದಿಯ ಹತ್ತಿರೆಯ ಪಾಂಡವ ಪ್ರತಿಷ್ಠೆಯ ತೀರ್ಥ") ಪಾಂಡವರ ಪ್ರಸ್ತಾಪವಿದ್ದು, ಪಂಚಲಿಂಗಗಳನ್ನು ಸ್ಥಾಪಿಸಿದ ವಿವರವಿದೆ. ನಂದೀಶ್ವರನ ಘಟನೆಯ ಹಿನ್ನೆಲೆಯಲ್ಲಿ ಆತನ ನೆಲೆಯೇ ಪಂಚಲಿಂಗೇಶ್ವರ ದೇವಾಲಯವಾಗಿದೆಯೆನ್ನುವುದು ಗಮನಾರ್ಹ. ಅಂಕಲಿಮಠದ ಹೊರಮಂಟಪದಲ್ಲಿ ಇರುವ ಹಾಗೂ ಈಗ ಬರಿದಾಗಿರುವ ಕೋಣೆ(ಪರದೇಸಪ್ಪನ ನೆಲಗವಿಮಠದೊಳಗೆ ಪ್ರವೇಶಿಸುವ ದ್ವಾರದ ಪಕ್ಕದ ಕೋಣೆ)ಯಲ್ಲಿ ನಂದಿ ವಿಗ್ರಹವನ್ನು ಇರಿಸಲಾಗಿದ್ದಿತೆಂಬ ಸಂಗತಿಯು ಇದನ್ನು ಸಮರ್ಥಿಸುವಂತೆ ತೋರುತ್ತದೆ. ಅಲ್ಲದೆ, ಬಳ್ಳಿಗಾವೆಯಲ್ಲಿ ಪಂಚಲಿಂಗೇಶ್ವರ ದೇವಾಲಯದ ಪಕ್ಕದಲ್ಲೇ ಇದ್ದ ಕಲ್ಲುಮಠದಲ್ಲಿ ವೀರಶೈವ

ಚಿತ್ರದುರ್ಗ ತಾಲ್ಲೂಕಿನ ಮೆದಕೆರೆಪುರ ಮತ್ತು ಗೋನೂರುಗಳ ಮಧ್ಯದಲ್ಲಿರುವ ಕಲ್ಲೇದೇವರ ಗುಡಿಯ ಮುಂದಿನ ಚಾಲುಕ್ಯ ತ್ರಿಭುವನಮಲ್ಲನ ಶಾಸನಕಲ್ಲಿನಲ್ಲಿ (ಈಗ ತುಂಡಾಗಿದೆ ; ಚಿ.೩೬), ಸೋಮೇಶ್ವರ ದೇವರಿಗೆ ಬಿಟ್ಟ ಭೂಮಿಯ ನಾಲ್ದೆಸೆಯ ಎಲ್ಲೆಗಳನ್ನು ಹೇಳುವಾಗ ಪಶ್ಚಿಮಕ್ಕೆ ಕೆರೆಯನ್ನೂ (ಇದು ಗೋನೂರು ಕೆರೆಯೆಂಬುದು ಸ್ಪಷ್ಟ) ಪೂರ್ವಕ್ಕೆ ಮೊರಡಿಹಳ್ಳವನ್ನೂ ಇದರೊಡನೆ ಸುಮಾರು ದಕ್ಷಿಣದಿಂದ ನೈರುತ್ಯಕ್ಕೆ ಹೂಲಿಯಕೆರೆಯ ಹಿಂಬದಿಯನ್ನೂ ಗುರುತಿಸಿದೆ. ಇಲ್ಲಿ ಹೂಲಿಯಕೆರೆಯು ಚಿತ್ರದುರ್ಗ ಪರಿಸರದ ಕೆರೆಯಾಗಿದ್ದು, ಜಲಾಶಯ ಸೂಚಿಯೆನಿಸಿದೆ.

ಕಸಬಾ ಹೋಬಳಿ ಗಂಜಿಗಟ್ಟೆ ಗ್ರಾಮದ ಬಳಿ ಪಾಂಡುರಂಗ ಬೆಟ್ಟದ ಮೇಲೆ ಜನ್ನೇಶ್ವರ ದೇವಾಲಯದ ಮುಂದೆ ನಿಂತಿರುವ ಹೊಯ್ಸಳ ವೀರಬಲ್ಲಾಳನ ಕ್ರಿ.ಶ. ೧೨೦೫ರ ಶಾಸನದಲ್ಲಿ (ಚಿ. ೨೩), ಹೂಲಿಯಕೆರೆಯನ್ನು ಧರ್ಮೇಶ್ವರ ದೇವರಿಗೆ ಧಾರಾಪೂರ್ವಕ ಮಾಡಿ ಬಿಟ್ಟಂತೆ ಹೇಳಿದೆ. ಇಲ್ಲಿ ಹೂಲಿಕೆರೆಯ ನಾಲ್ಕೂ ದಿಕ್ಕಿನ ಸೀಮಾ ವಿವರಗಳಿವೆ. ಇವುಗಳನ್ನು ಗಮನಿಸಿದರೆ ಚಿತ್ರದುರ್ಗ ಪರಿಸರದ ಹೂಲಿಕೆರೆಗೂ ಇದಕ್ಕೂ ಸಂಬಂಧವಿಲ್ಲವೆನ್ನುವುದು ವ್ಯಕ್ತಪಡುತ್ತದೆ. ಅದು ಹಿಂದಿನ ಹೊಳಲ್ಕೆರೆ ನಾಡಿಗೆ ಸೇರಿದ ಪ್ರದೇಶವಾಗಿದ್ದಿತು. ಆದರೆ ಈ ಶಾಸನದಲ್ಲಿ ಚಿತ್ರದುರ್ಗ ಬೆಟ್ಟದ ಪಶ್ಚಿಮ ದಿಕ್ಕಿನಲ್ಲಿರುವ 'ಹುಲಿಯಗೊಂದಿ'ಯ ಪ್ರಸ್ತಾಪವಿರುವುದು ಗಮನಾರ್ಹ.

ಮೇಲೆಯೇ ಹೇಳಿದಂತೆ, ಚಿತ್ರದುರ್ಗ ಬೆಟ್ಟದ ಹಿಡಂಬೇಶ್ವರ ದೇವಾಲಯದ ನವರಂಗದಲ್ಲಿ ನಿಲ್ಲಿಸಿರುವ ಕ್ರಿ.ಶ. ೧೨೮೬ರ ಶಾಸನವು (ಚಿ. ೧೨), ಪೆರುಮಾಳೆ ದೇವನು ತನ್ನ ಹೆಸರಿನಲ್ಲಿ ಬೆಮ್ಮತ್ತನೂರದುರ್ಗದ ಹೂಲಿಯಬಾವಿಯಲ್ಲಿ ಮಾಡಿದ ಪುರದ ಸಂಗತಿಯನ್ನು ಗೋಪಾಲಪುರ ಮತ್ತು ಮೆದೆಹಳ್ಳಿಯ ಗಡಿಯಲ್ಲಿರುವ ಕಲ್ಲೊಂದು ನಿರ್ದೇಶಿತವಾದ ಇದೇ ಅವಧಿಯ ಪೆರುಮಾಳೆಯ ಇನ್ನೊಂದು ಶಾಸನವು[24] ಸಮರ್ಥಿಸುತ್ತದೆ.

---

ಅಕ್ಷರಾಭ್ಯಾಸದ 'ಅಂಕಲಿಪಿಮಠ'ವಿದ್ದು, ಅಲ್ಲಿ ಮಠದ ಅಯ್ಯನವರು ಬಾಲಕರಿಗೆ ವಿದ್ಯಾಭ್ಯಾಸ ಮಾಡಿಸುತ್ತಿದ್ದರಂತೆ. ಚಿತ್ರದುರ್ಗದ ಅಂಕಲಿಮಠದ ವ್ಯವಸ್ಥೆಗೆ ಇದು ಸಂಪೂರ್ಣ ಹೊಂದುತ್ತದೆನ್ನಬಹುದು. ಅಂಕಲಿಮಠದ ಒಟ್ಟು ರಚನೆಯೇ ಇದನ್ನು ಪುಷ್ಟೀಕರಿಸುತ್ತದೆ.

ವೀರಶೈವದ ಉತ್ಕರ್ಷದ ಎದುರು ನಿಲ್ಲಲಾರದ ಕಾಳಾಮುಖಪಂಥವು ಕೊನೆಗೆ ಅದರಲ್ಲೇ ವಿಲೀನಗೊಂಡುದು ಹಾಗೂ ರಾಜಪೂಜಿತ ಶೈವಗುರುಗಳ ಹೆಸರಾಂತ ಕೇಂದ್ರವೆನಿಸಿದ್ದ ಪೂವಲ್ಲಿ(ಹೂಲಿ)ಯ ಮಠವು ಈಗ ಪ್ರಸಿದ್ಧ ವೀರಶೈವ ಮಠವಾಗಿರುವುದೇ ಅದಕ್ಕೆ ಉದಾಹರಣೆಯಾಗಿರುವುದು ಉಲ್ಲೇಖನೀಯ. ಇಂಥದೇ ಹಿನ್ನೆಲೆಯಲ್ಲಿ ಬೆಳೆದಿರಬಹುದಾದ ಅಂಕಲಿಮಠವು ಸಹಾ ಈಗ ಪ್ರಸಿದ್ಧ ವೀರಶೈವ ಪೀಠವೆನಿಸಿದ ಚಿತ್ರದುರ್ಗದ ಶ್ರೀ ಬೃಹನ್ಮಠದ ಅಧೀನಕ್ಕೊಳಪಟ್ಟಿದೆ. 'ಅಂಕಲಿಮಠದ ಊಟ, ಮುರಗೀಮಠದ ನೋಟ' ಎಂಬ ಜನಪ್ರಿಯ ಹೇಳಿಕೆಯ ಅಂಕಲಿಮಠವು ಅನ್ನದಾಸೋಹ ನಡೆಸುತ್ತಿದ್ದ ಕೇಂದ್ರವಾಗಿದ್ದಿತೆಂಬುದನ್ನು ಪುಷ್ಟೀಕರಿಸುತ್ತದೆ. 'ಚಿನ್ಮೂಲಾದ್ರಿ ಹುಲಿಗೊಂದಿಮಠದ ಅಡವಿಯೋಗೀಂದ್ರ ಮಹಾಸ್ವಾಮಿ'ಗಳವರು ಅಂಕಲಿಮಠದಲ್ಲಿ ನೆಲೆಸಿದ್ದಿರಬೇಕೆಂಬ ಅಭಿಪ್ರಾಯವೂ ಇದೆ. ಶ್ರೀ ಬೃಹನ್ಮಠದ ಶ್ರೀ ಜಯದೇವ ಸ್ವಾಮಿಗಳವರ ಕಾಲದಲ್ಲಿ ಮುಳುಗಾಯಿ ಸಿದ್ದಲಿಂಗೇಶ್ವರ ಸ್ವಾಮಿಗಳೆಂಬುವರು ಇಲ್ಲಿ ತಂಗಿದ್ದರು. ಬೆಳಗಾವಿ ಜಿಲ್ಲೆ ಅಂಕಲಗಿಯ ಸ್ವಾಮಿಗಳ ಮತ್ತು ಚಿತ್ರದುರ್ಗ ಅಂಕಲಿಮಠದ ಸಂಬಂಧವನ್ನು ಕುರಿತು ಸಂಶೋಧನೆ ಆಗಬೇಕಿದೆಯೆಂಬ ಆಶಯ ಹಾಗೂ ಅಂಕಲಿಸ್ವಾಮಿಗಳೆಂಬುವರು ಮೂಡಣದಿಕ್ಕಿನ ಹೇಮಾವತಿ–ಹೊದ್ದಿಗ್ಗೆರೆಯ ಸಮೀಪದಿಂದ ಬಂದವರು; ಅಂಕಲಿಮಠಕ್ಕೂ ಬೆಳಗಾವಿ ಜಿಲ್ಲೆಯ ಅಂಕಲಗಿ ಮಠದ ಸ್ವಾಮಿಗಳಿಗೂ ಸಂಬಂಧವಿಲ್ಲ, ಇತ್ಯಾದಿ ಹೇಳಿಕೆಗಳ ಹಿನ್ನೆಲೆಯಲ್ಲಿ ಈ ಮಠದ ಆಮೂಲಾಗ್ರ ಶೋಧನೆ ಆಗಬೇಕಿದೆ. ಇಲ್ಲಿ ಹೇಳಬೇಕಾದ ಇನ್ನೊಂದು ಸಂಗತಿಯೆಂದರೆ, ಅಂಕಲಿಮಠವು ಮೂಲದಲ್ಲಿ ವಿದ್ಯಾಕೇಂದ್ರವೆನಿಸಿ, ಬಳ್ಳಿಗಾವೆಯಲ್ಲಿರುವಂತೆ 'ಅಂಕಲಿಪಿ ಮಠ'ವೇ ಆಗಿರುವ ಸಾಧ್ಯತೆಯಿದ್ದು, ಆ ಹೆಸರೇ 'ಅಂಕಲಿಮಠ'ವಾಗಿದ್ದಿರಲೂಬಹುದು. ಈ ಎಲ್ಲ ಅಂಶಗಳ ಬಗೆಗೆ ಅಧ್ಯಯನ ಮುಂದುವರೆದಿದೆ. ಒಟ್ಟಿನಲ್ಲಿ, ಹೂಲಿ-ಹೂ(ಹು)ಲಿಗೊಂದಿ-ಪಂಚಲಿಂಗದೇವರ ನೆಲೆ ಇವುಗಳ ಪರಸ್ಪರ ಸಂಬಂಧವು ಕುತೂಹಲಕಾರಿಯಾದುದು,

24 ಚಿತ್ರದುರ್ಗದಿಂದ ಮಲ್ಲಾಪುರದ ಕೆರೆಗೆ ಹೋಗುವ ಬಂಡಿಜಾಡಿನ ಎಡಬದಿಯಲ್ಲಿ ಎನ್. ಬಿ. ಹನುಮಂತಪ್ಪ ಮತ್ತು ಎನ್. ಬಿ. ರಾಮಪ್ಪ ಅವರ ಹೊಲದ ಬದುವಿನಲ್ಲಿ ಈ ಕಲ್ಲು ನಿಂತಿದೆ ; ಈಗ ಇದರ ಬಲಭಾಗ ಮುಕ್ಕಾಗಿದ್ದು ಕೆಲವು ಅಕ್ಷರಗಳು ನಷ್ಟವಾಗಿವೆ.

ಆದರೆ ಈ ಎರಡು ಶಾಸನಗಳಲ್ಲಿಯು 'ಬೆಮ್ಮತ್ತನೂರ ದುರ್ಗ' ಮತ್ತು 'ಬೆಮ್ಮತ್ತನೂರು'ಎಂಬ ರೂಪಗಳನ್ನು ಗಮನಿಸಬೇಕು. ಈ ಸ್ಥಳವಾಚಕಗಳ ಹಿನ್ನೆಲೆಯಲ್ಲಿ ಹೂಲಿಯಕೆರೆ/ಬಾವಿಗಳು ಜಲಾಶಯ ಸೂಚಿಯಾಗಿ ಕಂಡುಬರುತ್ತವೆ. ಅಲ್ಲದೆ, ಹೂಲಿಕೆರೆ/ಬಾವಿಗಳು ಚಿತ್ರದುರ್ಗ ಬೆಟ್ಟ ಪರಿಸರಕ್ಕೇ ಹೊಂದಿಕೊಂಡಿರುವು ವೆಂಬುದು ವ್ಯಕ್ತಪಡುತ್ತದೆ.

ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕಿನ ಹೂಲಿ ಸ್ಥಳದಿಂದ ೪–೫ ಕಿ. ಮೀ. ವ್ಯಾಪ್ತಿಯಲ್ಲಿಯೇ ಹೂಲಿ ಕಟ್ಟೆಯಿದ್ದು, ಹೂಲಿಯಿಂದಾಗಿಯೇ ಆ ಕಟ್ಟೆಗೆ ಆ ಹೆಸರು ಬಂದಿರುವುದು ಸಂಭವನೀಯ. ಅಲ್ಲದೆ, ಚಾರಿತ್ರಿಕ ಪ್ರಸಿದ್ಧಿ ಪಡೆದ ಹೂಲಿಯು ಹಿಂದೊಮ್ಮೆ ಹೊಂದಿದ್ದ ವಿಸ್ತಾರದ ಬಗೆಗೂ ಇದು ಸೂಚಿಸುತ್ತದೆನ್ನಬಹುದು. ಇಂತಹ ಇನ್ನೂ ಒಂದೆರಡು ಉದಾಹರಣೆಗಳುಂಟು. ಚಿತ್ರದುರ್ಗ ಪರಿಸರದಲ್ಲಿಯೂ ಹೂಲಿಯ ಕೆರೆಯ ಸಾಲಿಗೇ ಬರುವ ಹು(ಹೂ)ಲಿಯಗೊಂದಿ ಮತ್ತು ಹೂಲಿಯಬಾವಿಗಳಿಗೂ ಇದೇ ಹೆಸರನ್ನು ಆರೋಪಿಸಿ ಗುರುತಿಸಿರಬಹುದು.

ಪೆರುಮಾಳೆಪುರ : ದೇವಾಲಯದ ಪರಿಸರವನ್ನೂ ಬ್ರಹ್ಮಪುರಿಯಲ್ಲಿ ವಾಸಿಸುವಂತಹ ವಿಶೇಷ ವರ್ಗದವರು ನೆಲಸಿರುವ ಎಡೆಯನ್ನೂ 'ಪುರ'ವೆಂದು ಗುರುತಿಸುವುದುಂಟು. ದೇವರ ಪೂಜೆ–ಪುನಸ್ಕಾರಾದಿಗಳಿಗೆ ಅನುಕೂಲ ಒದಗಿಸುವ ಕೇಂದ್ರವೆಂತಲೂ ಕರೆಯುವುದುಂಟು. ಪೆರುಮಾಳೆದೇವನು ಬೆಮ್ಮತ್ತನೂರ ಹೂಲಿಯ ಬಾವಿಯಲ್ಲಿ ಚತುಸ್ಸೀಮೆಯಲ್ಲು ಕಲ್ಲುನೆಟ್ಟು ತನ್ನ ಹೆಸರಿನಲ್ಲಿ ಪುರವನ್ನು ಮಾಡಿದುದನ್ನು ಆತನ ಶಾಸನವೇ ಹೇಳುತ್ತದೆ (ಚಿ. ೧೨). ಸೀಮಾ ಸಂಬಂಧದ ಈ 'ನೆಟ್ಟಕಲ್ಲು'ಗಳ ಬಗೆಗೆ ಈಗ ಏನನ್ನೂ ತಿಳಿಯುವಂತಿಲ್ಲವೆನ್ನಬಹುದು.

ಬೆಟ್ಟದಲ್ಲಿ 'ಗೋಪಾಲಸ್ವಾಮಿಹೊಂಡ'ದ ಮೇಲು ಬದಿಯಲ್ಲಿರುವ ಗೋಪಾಲದೇವರ ಗುಡಿಯು ಪೆರುಮಾಳೆಪುರದ ಕೇಂದ್ರವಾಗಿದ್ದು, ಈ ದೇವಾಲಯ ಬಲಬದಿಯ ಆವರಣದಲ್ಲಿ ಈ ಪುರವು ನೆಲೆಗೊಂಡಿದ್ದಿರುವ ಸಾಧ್ಯತೆ ಹೆಚ್ಚು. ಈಗಲೂ ಅಲ್ಲಿ ಕಂಡುಬರುವ ನಿವೇಶನ, ಬೀದಿ ಇನ್ನಿತರ ಕುರುಹುಗಳು ಇದನ್ನು ಸಮರ್ಥಿಸುತ್ತವೆ. ಆದರೆ ಅನಂತರವೂ ಇಲ್ಲಿ ಗೃಹ ನಿರ್ಮಾಣದಂತಹ ಕಾಮಗಾರಿ ಮುಂದುವರೆದಿರುವುದರಿಂದ ಮೂಲರಚನೆಯಲ್ಲಿ ಮಾರ್ಪಾಟಾಗಿರಲೂ ಬಹುದು.

ಈ ಪುರವನ್ನು ಪ್ರವೇಶಿಸಲು ಇದ್ದ ಮಾರ್ಗಗಳಲ್ಲಿ ಈಗಿನ 'ಗರುಡಾಂಜನೇಯ ಬಾಗಿಲು' ಪ್ರಮುಖವಾಗಿದ್ದಿತೆಂದು ತೋರುತ್ತದೆ; ಪುರವು ಶ್ರೀವೈಷ್ಣವ–ವೈಷ್ಣವ ಕ್ಷೇತ್ರವಾಗಿದ್ದಿತೆಂಬುದರ ಬಗೆಗೆ ಗಮನೀಯ ಸಾಕ್ಷ್ಯವಾಗಿದೆ. ಭಾಗವತಶ್ರೇಷ್ಠರೆನಿಸಿದ ಹಾಗೂ ವಿಷ್ಣುವಿನ ಹಿರಿಯ-ಕಿರಿಯ ಭಕ್ತರೆನಿಸಿಕೊಂಡ ಗರುಡ–ಹನುಮರೀರ್ವರಿಗೂ ಶ್ರೀವೈಷ್ಣವ–ವೈಷ್ಣವ ನೆಲೆಯಲ್ಲಿ ದೊರೆತಿರುವ ಸ್ಥಾನ ಪೂಜ್ಯನೀಯವಾದುದು. ಪಂಚಮುಖಿ ಆಂಜನೇಯನ ಶಿಲ್ಪವೊಂದರಲ್ಲಿ, ಈತನ ತಲೆಯ ಹಿಂದಿನ ಮುಖವಾಗಿ ಗರುಡನದನ್ನು ಬಿಡಿಸಿದೆ ! ಗೋಪಾಲ ಕೃಷ್ಣ ದೇವರ ಗುಡಿ ಹಾಗೂ ಪೆರುಮಾಳೆಪುರದ ಆವರಣವನ್ನು ತಲುಪುವ ಮೊದಲು, ಇಲ್ಲಿಯ ನಾಯಕ ಅರಸರ ಕಾಲದಲ್ಲಿ ನಿರ್ಮಾಣವಾದ ಕೋಟೆಸಾಲೊಂದು (ತುಪ್ಪದಕೊಳದ ಬತೇರಿ ಸುತ್ತು) ಅಡ್ಡ ಹಾಯ್ದಿದ್ದು, ಅದನ್ನು ದಾಟಲು ನಿರ್ಮಿಸಿರುವ ದ್ವಾರಕ್ಕೆ ಗರುಡಾಂಜನೇಯ ಬಾಗಿಲೆನ್ನುವರು. ಈ ಬಾಗಿಲ ಮಂಟಪದ ಹಿಂಬದಿಯಲ್ಲಿ ಎಡಬಲಗಳಲ್ಲಿಯೂ ಹುಟ್ಟುಬಂಡೆಯ ಮೇಲೆ ಗರುಡ–ಹನುಮರ ಉಬ್ಬುಗೆತ್ತನೆಗಳಿವೆ. ಹನುಮನ ಕೆತ್ತನೆಯು ಗರುಡನಿಗಿಂತ ದೊಡ್ಡದು. ಈ ಎರಡು ಕೆತ್ತನೆಗಳಿಗೂ ಪುಟ್ಟ ಗುಡಿಗಳನ್ನು ನಿರ್ಮಿಸಲಾಗಿದೆ. ಇಲ್ಲಿಯ ನಾಯಕ ಅರಸರೂ ಇವುಗಳ ಬಗೆಗೆ ಭಕ್ತಿಯಿಂದ ನಡೆದುಕೊಂಡುದು ಉಂಟೆಂಬುದಕ್ಕೆ ಈ ನಿರ್ಮಾಣ ಸಾಕ್ಷಿಯಾಗಿದೆ. ಈ ದ್ವಾರವು ನಿರ್ಮಾಣಗೊಳ್ಳುವ ಪೂರ್ವದಲ್ಲಿಯೇ ಈ ಉಬ್ಬುಗೆತ್ತನೆಗಳು ಇಲ್ಲಿಯ ಬಂಡೆಗಳ ಮೇಲೆ ಮೂಡಿದ್ದಿರಬೇಕೆಂಬ ಸಂಗತಿಯನ್ನು ಈಗಾಗಲೇ ಹೇಳಿದೆ.[25] ಈ ಕ್ಷೇತ್ರದ ಧಾರ್ಮಿಕಪಂಥದ ಕುರುಹಾಗಿ ಗೋಪಾಲಕೃಷ್ಣದೇವರ ಪ್ರತಿಷ್ಠಾಪನೆಯ

25 ನೋಡಿ : ಲಕ್ಷ್ಮಣ್‌ತೆಲಗಾವಿ : 'ಕಾಮಗೇತಿ ಅರಸರು–ಕೆಲವು ವಿಚಾರಗಳು : ಪ್ರತಿಕ್ರಿಯೆ', ಮಾನವಿಕ ಕರ್ನಾಟಕ,೧೭–೪, ಅಕ್ಟೋಬರ್ ೧೯೮೭, ಪು. ೭೭-೭೮

ಅವಧಿಯಲ್ಲಿ ಇಲ್ಲಿ ಮೂಡಿದ್ದಿರಬೇಕು. ಶ್ರೀವೈಷ್ಣವ ಕ್ಷೇತ್ರಗಳಲ್ಲಿ ಇದು ಸಾಮಾನ್ಯವೆಂಬುದಕ್ಕೆ ಹಲವಾರು ಉದಾಹರಣೆಗಳು ಕಂಡುಬರುತ್ತವೆ. ತುಮಕೂರು ಜಿಲ್ಲೆ, ದೇವರಾಯನದುರ್ಗದ ಬೆಟ್ಟದ ಮೇಲೆ ಇರುವ ಲಕ್ಷ್ಮೀನರಸಿಂಹದೇವರ ನೆಲೆಯ ಗವಿಯ ಪ್ರವೇಶದ ಇಕ್ಕೆಲಗಳಲ್ಲಿ ಕೈಮುಗಿದು ನಿಂತಿರುವ ಗರುಡ–ಹನುಮರ ಉಬ್ಬುಗೆತ್ತನೆಗಳ ಒಂದು ಉದಾಹರಣೆಯು[26] ಇಲ್ಲಿ ಸಮಂಜಸವೆನಿಸಬಹುದು.

ಪೆರುಮಾಳೆಪುರದ ಪರಿಸರವನ್ನೊಮ್ಮೆ ಅವಲೋಕಿಸಿದರೆ, ಗೋಪಾಲಕೃಷ್ಣ ದೇವಾಲಯವೂ ಪುರದ ಭಾಗವೂ ಕೋಳವೂ ಶೃಂಗಾರತೋಟದ ಅಂಗಳವೂ ಅದರಾಚೆಗಿನ ಅರಮನೆಯ ಆವರಣವೂ ಗೋಚರಿಸುತ್ತವೆ. ಸುತ್ತಲೂ ಬೆಟ್ಟ ಭಾಗದಿಂದ ಆವೃತವಾದ, ಜಲಸಮೃದ್ಧ ಹಾಗೂ ವಿಶಾಲವಾದ ಈ ಮಹಾಕಣಿವೆ (ಪಚ್ಚೆ/ಪಂಚಕಣಿವೆ ?)ಯನ್ನು ಅಲ್ಲಲ್ಲಿ ಸಮತಟ್ಟಾಗಿಸಿ, ಕೃತಕ ಕಟ್ಟೆ, ವೇದಿಕೆ ಮೊದಲಾದುವನ್ನು ನಿರ್ಮಿಸುವುದರೊಡನೆ ವಾಸಯೋಗ್ಯ ತಾಣವನ್ನಾಗಿಸಿಕೊಂಡಿರುವುದು ಕಂಡುಬರುತ್ತದೆ. (ನಾಯಕ ಅರಸರ ಕಾಲದಲ್ಲಿ ಈ ಪರಿಸರವು ಸಾಕಷ್ಟು ಅಭಿವೃದ್ಧಿಗೊಂಡುದಂತೂ ದಿಟ). ಇಲ್ಲಿ ಬ್ರಹ್ಮಪುರಿಗೇರಿಯು ಪ್ರತ್ಯೇಕವಾಗಿದ್ದುದರಿಂದ ಈ ಪುರದಲ್ಲಿ ಬಹುವಿಧದ (?) ಜನರು ವಾಸವಾಗಿದ್ದಿರಬೇಕೆಂದೂ 'ಪುರ'ದ ಎಲ್ಲ ಲಕ್ಷಣಗಳಿಂದ ಕೂಡಿದ್ದು, ಜನಜಂಗುಳಿಯಿಂದ ತುಂಬಿ ತುಳುಕುತ್ತಿದ್ದಿರಬೇಕೆಂದೂ ಭಾವಿಸಲಾಸ್ಪದವಿದೆ.

ಹದಿನೆಂಟನೆಯ ಶತಮಾನದಲ್ಲಿ ಇಲ್ಲಿಯ ಗೋಪಾಲಕೃಷ್ಣ ದೇವಾಲಯದ ಪಕ್ಕದಲ್ಲಿ ಶ್ರೀವೈಷ್ಣವ ಸಂಪ್ರದಾಯದ ಮಠವೊಂದಿದ್ದು, ಅದನ್ನು ಪಾಂಚರಾತ್ರ ಮಠಂ ಎಂದು ಕರೆಯಲಾಗುತ್ತಿದ್ದಿತೆಂದು ವ್ಯಕ್ತಪಡುತ್ತದೆ.[27] ಪೆರುಮಾಳೆಪುರವು ಮೂಲದಲ್ಲಿ ಶ್ರೀವೈಷ್ಣವ ಕ್ಷೇತ್ರವಾಗಿದ್ದು, ಆ ಪರಂಪರೆಯು ಮುಂದುವರೆದುಕೊಂಡು ಬಂದುದಕ್ಕೆ ಇದು ಆಧಾರವೆನಿಸುತ್ತದೆ. ಒಟ್ಟಿನಲ್ಲಿ, ಆನಂತರವೂ ಈ ಪರಿಸರವು ಪಾಂಚರಾತ್ರ ಶ್ರೀವೈಷ್ಣವ ಕೇಂದ್ರವೆನಿಸಿ, 'ಪಾಂಚರಾತ್ರ ರಕ್ಷೆ'ಯ ಪ್ರಯತ್ನವು ಮುಂದುವರೆಸಿದುದು ಗಮನಾರ್ಹ. (ಈ ಬಗೆಗೆ ಇನ್ನೂ ಶೋಧಿಸಬೇಕಿದೆ).

ಬ್ರಹ್ಮಪುರಿಗೇರಿ : ನಗರ/ಪುರದ ಬ್ರಾಹ್ಮಣ ವಿದ್ವಾಂಸರು ವಾಸಿಸುವ ಭಾಗವನ್ನೆ ಬ್ರಹ್ಮಪುರಿ ಎಂದು ಕರೆದಿವೆ. ಶಾಸನಗಳು ಅನೇಕ ರಾಜರೂ ದಂಡನಾಯಕರೂ ಬ್ರಹ್ಮಪುರಿಗಳನ್ನು ಸ್ಥಾಪಿಸಿ ದತ್ತಿಬಿಟ್ಟುದನ್ನು ಹೇಳುತ್ತವೆ. ಪುಲಿಗೆರೆ(ಲಕ್ಷ್ಮೇಶ್ವರ)ಯ ಬದ್ದೆಗ ಬ್ರಹ್ಮಪುರಿ' (೧೦ನೆಯ ಶತಮಾನ), ಬಳ್ಳಿಗಾವೆಯಲ್ಲಿ ಕೇಶವದೇವನೆಂಬಾತನು ಮಾಡಿಸಿದ ಕೇಶವ ದೇವಾಲಯ, ವೀರಕೇಶವಪುರ ಹಾಗೂ ಬ್ರಹ್ಮಪುರಿಗಳು ಗಮನಾರ್ಹವಾದುವು. ಬ್ರಹ್ಮಪುರಿಯು ಒಂದು ಅಥವಾ ಕೆಲವು ಬೀದಿಗಳನ್ನು ಹೊಂದಿರುತ್ತಿದ್ದು, ಅದಕ್ಕೆ ನೀಡಲಾಗಿದ್ದ ಭೂಮಿಯಾಗಲೀ ಬೀದಿಯಾಗಲೀ ಇತರರಿಂದ ಅತಿಕ್ರಮಣಕ್ಕೆ ಒಳಗಾಗದಂತೆ ನೋಡಿಯ

---

26 *MAR.*, 1934, p. 18

27 ಈ ಮಠವನ್ನು ತಿರುನಾರಾಯಣಾಚಾರ್ಯರೆಂಬುವರು ಸ್ಥಾಪಿಸಿದರೆಂತಲೂ ಇದೇ ಮೂಲಮಠವೆಂತಲೂ ತಿಳಿದುಬರುತ್ತದೆ. ಈ ಮಠದ ಶಾಖೆಯು ತುಮಕೂರಿನ ಶ್ರೀ ಕೋದಂಡರಾಮಸ್ವಾಮಿ ದೇವಾಲಯದಲ್ಲಿ ಇದ್ದು, ಅದನ್ನು ಪಾಂಚರಾತ್ರ ಮಂಡಲಂ ಎಂದು ಈಗ ಕರೆಯಲಾಗುತ್ತದೆ.

ಚಿತ್ರದುರ್ಗ ಜಿಲ್ಲೆಯಲ್ಲಿ ರಾಮಾನುಜ ಕೂಟವನ್ನೇರ್ಪಡಿಸುವ ಕುಟುಂಬಗಳಿರುವ ಸ್ಥಾನಗಳೆಂದರೆ ಚಿತ್ರದುರ್ಗ ಮತ್ತು ಹೊಳಲ್ಕೆರೆ ತಾಲ್ಲೂಕಿನ ಹೊರಕೆರೆದೇವರಪುರ. ಹಂಪೆ-ಕಾಮಲಾಪುರದಲ್ಲಿರುವ ಶ್ರೀವೈಷ್ಣವ ಗುರುಗಳು ಈಗಲೂ ಚಿತ್ರದುರ್ಗಕ್ಕೆ ಯಾತ್ರೆ ಕೈಗೊಂಡು ಭಕ್ತರನ್ನು ಅನುಗ್ರಹಿಸುವರಲ್ಲದೆ, ಇಲ್ಲಿಯ ವೆಂಕಟರಮಣಸ್ವಾಮಿ ತೇರಿನ ಸಂದರ್ಭದಲ್ಲಿ ಇಲ್ಲಿಯೇ ವಾಸ್ತವ್ಯ ಮಾಡುವರೆಂತಲೂ ಇವರ ಉತ್ಸವದಲ್ಲಿ ಚಿತ್ರದುರ್ಗದ ನಿಶಾನಿ ಮನೆತನದವರು ತಮ್ಮ ನಿಶಾನಿ ಹಿಡಿದು ಗೌರವ ತೋರುವರೆಂತಲೂ ತಿಳಿಯುತ್ತದೆ. ಇದು ಪರಂಪರೆಯಿಂದ ಬಂದ ರಾಜಗೌರವದ ಸಂಕೇತವೆಂದು ತೋರುತ್ತದೆ.

ಇಲ್ಲಿಯ ಕೆಲವು ಸಂಗತಿಗಳನ್ನು ತಿಳಿಸಿ ಸಹಕರಿಸಿದವರು ಎಸ್. ತಿರುನಾರಾಯಣಭಟ್ (ಚಿತ್ರದುರ್ಗದ ಪ್ರಸನ್ನ ವೆಂಕಟೇಶ್ವರಸ್ವಾಮಿಯ ಅರ್ಚಕರು), ಅವರ ಸಹೋದರ ಲಕ್ಷ್ಮೀನರಸಿಂಹಭಟ್ ಹಾಗೂ ಹು.ಶ್ರೀ. ಪಾಂಡುರಂಗ ಜೋಯಿಸ್ ಅವರುಗಳು.

ಬ್ರಾಹ್ಮಣರು ನೋಡಿಕೊಳ್ಳುತ್ತಿದ್ದರೆಂಬ ಉದಾಹರಣೆಯೂ[28] ಗಮನ ಸೆಳೆಯುತ್ತದೆ.

ದೇವಸ್ಥಾನಗಳ ಪಕ್ಕ/ಸನಿಹದಲ್ಲಿ ಅವುಗಳಿಗೇ ಮೀಸಲಾದ ಹೂದೋಟವಿರುವುದೂ ತೋಟಗಳಿಗೆ ಬಾವಿಗಳಿರುವುದೂ ಏತಗಳಿಂದ ತೋಟಕ್ಕೆ ನೀರನ್ನು ಹಾಯಿಸುವುದೂ ಹಿಂದಿನಿಂದಲೂ ನಡೆದುಬಂದಿದೆ. ಸೇವುಣರ ಶಾಸನವೊಂದರಲ್ಲಿ ಬ್ರಹ್ಮಪುರಿಯುನ್ನೂ ಮಾವಿನ ತೋಪು ಮತ್ತು ಹೂವಿನತೋಟಗಳನ್ನೂ ಒಟ್ಟಿಗೇ ಪ್ರಸ್ತಾಪಿಸಿರುವುದುಂಟು.[29] ನಿತ್ಯ ಪೂಜಾದಿಗಳಿಗೆ ದೇವಾಲಯ ಪರಿಸರದಲ್ಲಿ ಹೂದೋಟವಿರುವುದನ್ನು ಹಲವಾರು ದೇವಾಲಯಗಳನ್ನು ಅನುಲಕ್ಷಿಸಿ ಹೇಳಬಹುದು. ಅಗ್ರಹಾರ/ಬ್ರಹ್ಮಪುರಿಯ ಆಗತ್ಯ ಭಾಗಗಳಾಗಿ ದೇವಾಲಯ, ಕೆರೆ/ಕೊಳ, ತೋಟ/ಕಾಡು/ಗದ್ದೆ, ಕೋಟೆ ಇತ್ಯಾದಿಗಳೂ ಇರುತ್ತಿದ್ದವೆಂಬುದು ಗಮನೀಯ.

ಪೆರುಮಾಳೆಪುರದಲ್ಲಿ ಬ್ರಹ್ಮಪುರಿಕೇರಿಯು ಇದ್ದ ನಿರ್ದಿಷ್ಟ ಸ್ಥಾನದ ಬಗೆಗೆ ಇಲ್ಲಿಯ ಶಾಸನಗಳಲ್ಲಿ ಸೂಚನೆಯಿಲ್ಲ. 'ಗೋಪಾಲಸ್ವಾಮಿ ಹೊಂಡ'ದ ದಕ್ಷಿಣ ದಂಡೆಯಲ್ಲಿರುವ ಪೂರ್ವ ಮತ್ತು ಪಶ್ಚಿಮದ ಎರಡೂ ಬದಿ (ಮೂಲೆ)ಗಳಲ್ಲಿ ಬ್ರಹ್ಮಪುರಿಗೇರಿ ಸೂಚನೆಯು ಬರಹವುಳ್ಳ ಎರಡೂ ಹುಟ್ಟುಬಂಡೆಗಳ ಮಧ್ಯಸ್ಥಾನವು ಶೃಂಗಾರತೋಟದ ಬಯಲೆಂದು ಕರೆಯಲ್ಪಡುತ್ತಿದೆ. ಈ ಹೊಂಡದ ದಂಡೆಯಲ್ಲಿದ್ದು ಈಗ ನಾಶವಾಗಿ ಹೋಗಿರುವುದೆಂದು ತಿಳಿಯಲಾಗುವ ಯಾವುದೋ ಮಂಟಪದ (?) ಅವಶೇಷಗಳು ಈಗಲೂ ಕಂಡುಬರುತ್ತಿದ್ದು, ಇದರ ವಿನಾ 'ಕೇರಿ'ಯಂತಹ ವಿಶಾಲ ರಚನೆಯು ಈ ಬಯಲಿನಲ್ಲಿ ಇದ್ದ ಸಾಧ್ಯತೆ ಇಲ್ಲ. ಆದ್ದರಿಂದ ಬ್ರಹ್ಮಪುರಿಗೇರಿಯು ಈ ಪುರದಲ್ಲೆ, ಶೃಂಗಾರ ತೋಟದ ಮಗ್ಗುಲಲ್ಲೆ ಇದ್ದಿರಬೇಕಾದರೆ, ಅದರ ನೆಲೆಯು ಈಗಿನ ಅರಮನೆ ಬಯಲು[30] ಪ್ರದೇಶವೇ

---

28 G.R. Kuppuswamy : *Economic Conditions in Karnataka*, Dharwar, 1975, p. 17

29 Shrinivas Ritti, Anand Kumbhar (Ed.): *Inscriptions from Solapur District*, Dharwad, 1988, p. 49 : No. 26, 1218 A.D.

30 ಅರಮನೆಗಳು: ಇಲ್ಲಿ ಆಳ್ವಿಕೆ ನಡೆಸಿದ ನಾಯಕ ಅರಸರ ಕಾಲದಲ್ಲಿ ಈ ಆವರಣದಲ್ಲಿ ಅರಮನೆಗಳ ನಿರ್ಮಾಣ/ದುರಸ್ತಿ ಕಾರ್ಯವು ಮೇಲಿಂದ ಮೇಲೆ ನಡೆಯಿತೆನ್ನುವುದಕ್ಕೆ ಪುರಾವೆಗಳು ದೊರಕುತ್ತವೆ. ಈ ಸಂಸ್ಥಾನದ ಮೊದಲನೆಯ ಕಾಮಗೇತಿ ಅರಸ ಮತ್ತಿ ತಿಮ್ಮಣ್ಣನಾಯಕನು ಕ್ರಿ.ಶ. ಸು. ೧೫೬೮ರಲ್ಲಿ ಮೇಲುದುರ್ಗದಲ್ಲಿ ಅರಮನೆಯನ್ನೂ ಇದರ ಸುತ್ತಿನ ಕೋಟೆಯನ್ನೂ ಕಟ್ಟಿಸಿದನು. ಇಲ್ಲಿ 'ಮೇಲುದುರ್ಗದ ಅರಮನೆ'ಯೇ ಮುಖ್ಯವಾದ ಅರಮನೆಯಾಗಿದ್ದಿತೆಂದು ತಿಳಿದುಬರುತ್ತದೆ. 'ನಾಗತೇರ ಹರವು' ಮೇಲೆ ಇರುವ ಎರಡು ಮದ್ದಿನ ಕಣಜಗಳ ಬಳಿಯೇ ಈ ಅರಮನೆ ಇದ್ದಿತೆಂತಲೂ ಸೂಚನೆ ಇದ್ದು, ಇದಕ್ಕೆ 'ದೊಡ್ಡ ಅರಮನೆ'ಯೆಂತಲೂ ಕರೆಯಲಾಗುತ್ತಿದ್ದಿತು. ಕ್ರಿ.ಶ. ೧೬೮೯ರಿಂದ ೧೭೨೧ರ ವರೆಗೆ ಅರಸನಾಗಿದ್ದ ಬಿಚ್ಚುಗತ್ತಿ ಭರಮಣ್ಣನಾಯಕನು ತನ್ನ ಕಾಲದಲ್ಲಿ ಈ 'ದೊಡ್ಡ ಅರಮನೆ'ಯನ್ನು ಬಿಚ್ಚಿಸಿ ಕಟ್ಟಿಸಿದನಲ್ಲದೆ ಚಿಕ್ಕ ಅರಮನೆ, ದೇಮವ್ವ(ದ್ಯಾಮವ್ವನಾಗತಿ)ನ ಅರಮನೆ, ತಂಗಿ ಭರಮವ್ವನ ಅರಮನೆಗಳನ್ನೂ ನಿರ್ಮಿಸಿದನು. ಈತನ ಮಗ ಹಿರೇ ಮದಕರಿನಾಯಕನು (ಕ್ರಿ.ಶ. ೧೭೨೧–೧೭೪೮) ಸಹಾ ಚಿಕ್ಕ ಅರಮನೆಯೊಂದನ್ನು ನಿರ್ಮಿಸಿದನೆಂದಿದೆ. ಈ ಸಂಸ್ಥಾನದ ಕಡೆಯ ಅರಸನಾಗಿ ಪ್ರಸಿದ್ಧನಾದ ರಾಜಾವೀರ ಮದಕರಿನಾಯಕನು (ಕ್ರಿ.ಶ. ೧೭೫೮-೧೭೭೯) ತನ್ನ ಕಾಲದಲ್ಲಿ ತಿಮ್ಮಣ್ಣನಾಯಕನ ಅರಮನೆಯಿದ್ದ ಜಾಗದಲ್ಲೆ, ಭರಮಣ್ಣನಾಯಕನಂತೆಯೇ, ಅದನ್ನು ನೂತನವಾಗಿ ಕಟ್ಟಿಸಿದನೆಂಬ ಸಂಗತಿಯು ಗಮನಾರ್ಹ. ಒಟ್ಟಿನಲ್ಲಿ, ಮೇಲುದುರ್ಗದ ಅರಮನೆಯೆಂದೇ ಪ್ರಸಿದ್ಧವಾಗಿದ್ದ ಪ್ರಧಾನ ಅರಮನೆಯು ಕಾಲಾಂತರದಲ್ಲಿ ಸಾಕಷ್ಟು ಮಾರ್ಪಾಟು ಹೊಂದಿ ಸುಧಾರಿಸಲ್ಪಟ್ಟಿತೆಂದು ವ್ಯಕ್ತಪಡುತ್ತದೆ. ಇಲ್ಲಿ ಪ್ರಸ್ತಾಪಿಸಿರುವ ಅರಮನೆಗಳಲ್ಲಿ ಒಂದೆರಡರ ವಿನಾ ಉಳಿದವು ಈಗಿನ ಅರಮನೆ ಆವರಣದಲ್ಲಿಯೇ ನೆಲೆಸಿದ್ದುವು.

ಇವಲ್ಲದೆ, ಕ್ರಿ.ಶ. ೧೫೬೮ರಲ್ಲಿಯೇ ಮತ್ತಿ ತಿಮ್ಮಣ್ಣನಾಯಕನು ಬೆಟ್ಟದಲ್ಲಿ ರಣಮಂಡಲವೆಂಬ ಸ್ಥಳದಲ್ಲಿ ಇನ್ನೊಂದು ಅರಮನೆಯನ್ನು ಕಟ್ಟಿಸಿದ್ದನೆಂಬುದನ್ನೂ ಗಮನಿಸಬೇಕು. (ಒಂದನೇ) ಕಸ್ತೂರಿ ರಂಗಪ್ಪನಾಯಕನ ಮಗ (ಇಮ್ಮಡಿ)ಮದಕರಿ ನಾಯಕನು (ಕ್ರಿ.ಶ. ೧೬೭೫-೧೬೮೬) 'ಕೆಳಗಣ ಅರಮನೆ'ಯೊಂದನ್ನು ಕಟ್ಟಿಸಿದನು. ಇವುಗಳೊಡನೆ ವೀರವ್ವನಾಗತಿ ಅರಮನೆ, ದಳವಾಯಿ ಅರಮನೆ ಮೊದಲಾದುವನ್ನೂ ಪ್ರಸ್ತಾಪಿಸಬಹುದು. ಇಲ್ಲಿಯ ಕೋಟೆಯ ಪ್ರತಿಯೊಂದು ಹೆಬ್ಬಾಗಿಲು ಬಳಿಯಲ್ಲೂ ಒಂದೊಂದು ಅರಮನೆ (ಅಧಿಕಾರಿ/ದಳವಾಯಿಗಳ ನಿವಾಸ ?) ಇದ್ದುವೆಂತಲೂ ಹೇಳಲಾಗುತ್ತದೆ.

ಆಗಿರಬೇಕೆಂಬುದನ್ನು ಸಾಧಾರವಾಗಿ ಸಮರ್ಥಿಸಬಹುದು.

ಈಗಿನ ಅರಮನೆಯ ಆವರಣವನ್ನೊಮ್ಮೆ ಪರಿಶೀಲಿಸಿದರೆ, ಇದು ಉತ್ತರ–ದಕ್ಷಿಣವಾಗಿರುವ ಒಂದು ವಿಶಾಲವಾದ ಮುಖ್ಯರಸ್ತೆಯಿಂದಲೂ ಸುವ್ಯವಸ್ಥೆಯಿಂದಲೂ ಕೂಡಿದ್ದು, ಈ ಭಾಗದ ನೆಲ್ಲಿಕಾಯಿ ಸಿದ್ದಪ್ಪನಗುಡ್ಡಕ್ಕೆ ಹೊಂದಿಕೊಂಡಂತೆ ಪಶ್ಚಿಮ ದಿಕ್ಕಿನ ಮೂಲೆಯಲ್ಲಿ ಬೃಹತ್ ಬಂಡೆಗಳ ಮೇಲಿನ ನೆಲಗಟ್ಟನ್ನಾಧರಿಸಿ ನಿಂತಿರುವ ಸುಬ್ರಹ್ಮಣ್ಯೇಶ್ವರ ದೇವಾಲಯದ ಕಡೆಗೆ ನಮ್ಮನ್ನು ಕರೆದೊಯ್ಯುತ್ತದೆ.[31] ಈ ದೇವಾಲಯವು ದ್ರಾವಿಡ ಶೈಲಿಯ, ಚೌಕಾಕಾರದ ಸರಳ ವಾಸ್ತು ರಚನೆಯುಳ್ಳ ಕಲ್ಲು ಕಟ್ಟಡವಾಗಿದ್ದು, ಒಂದೇ ಕೋಣೆಯಿಂದ ಕೂಡಿದೆ; ಪೂರ್ವಾಭಿಮುಖವಾಗಿದೆ. ಗುಡಿಯ ಮಧ್ಯದಲ್ಲಿ ಆಲಯಕ್ಕೆ ಆಧಾರವಾಗಿರುವ ನಾಲ್ಕು ಕಂಬಗಳ ಮಧ್ಯೆ ಕಂಬಗಳಿಗೆ ಹೊಂದಿದಂತೆ ೭೬ ಸೆಂ.ಮೀ. ಎತ್ತರದ ಕಟ್ಟೆಯನ್ನು ನಿರ್ಮಿಸಲಾಗಿದೆ. ದ್ವಾರಕ್ಕಭಿಮುಖವಾಗಿರುವ ಭಿತ್ತಿಯಲ್ಲಿ ಪುಷ್ಪದ ಕೆತ್ತನೆಯ ಕೆಳಗೆ ಏಳು ಹೆಡೆಯ ಹಾವಿನ ನೆಳಲಲ್ಲಿರುವ ಶಿವಲಿಂಗವೂ ಎಡಬಲಗಳಲ್ಲಿ ನಾಗರ ಉಬ್ಬುಶಿಲ್ಪಗಳೂ ಇದ್ದು, ಇವುಗಳ ವಿನಾ ಇಲ್ಲಿ ಈಗ ಯಾವ ಶಿಲ್ಪವೂ ಕಂಡುಬರುವುದಿಲ್ಲ.[32] ಸ್ತಂಭಗಳಲ್ಲಿ ವೇಣುಗೋಪಾಲ, ಕಾಳಿಂಗ ಮರ್ದನ, ಆಂಜನೇಯ, ಪುರುಷಾಮೃಗ, ನಂದಿ, ಲಿಂಗ ಮೊದಲಾದ ಉಬ್ಬುಶಿಲ್ಪಗಳಿದ್ದು, ಶೈವ–ವೈಷ್ಣವ–ಈ ಎರಡು ಸಂಪ್ರದಾಯಗಳ ಪ್ರತೀಕವೆನಿಸಿವೆ ; ಸುಬ್ರಹ್ಮಣ್ಯೇಶ್ವರನ ನೆಲೆಯನ್ನು ಪ್ರತಿನಿಧಿಸಿವೆ. ಸುಬ್ರಹ್ಮಣ್ಯೇಶ್ವರ ದೇವರಿಗೆ ನಾಗಾಭರಣ ಮಾಡಿಸಿಕೊಟ್ಟಿರುವ ಉಲ್ಲೇಖದ ವಿನಾ ಈ ದೇವಾಲಯವನ್ನು ನಾಯಕ ಅರಸರು ತಮ್ಮ ಅವಧಿಯಲ್ಲಿ ನಿರ್ಮಿಸಿದರೆಂಬುದಕ್ಕೆ ಆಧಾರ ದೊರೆಯುವುದಿಲ್ಲ. ಆದರೆ ಇದನ್ನು ಮರುನಿರ್ಮಿಸಿರುವ/ದುರಸ್ತಿಗೊಳಿಸಿರುವ ಕಾರ್ಯವು ನಡೆದಿರುವ ಸಾಧ್ಯತೆಯೂ ಇಲ್ಲದಿಲ್ಲ. ಈ ದೇವಾಲಯವು ಇಲ್ಲಿದ್ದ ಬ್ರಹ್ಮಪುರಿಕೇರಿಯ ಕೊನೆಯಲ್ಲಿ ನಿರ್ಮಾಣಗೊಂಡಿದ್ದು, ಇಲ್ಲಿಯ ಧಾರ್ಮಿಕ ಕ್ರಿಯೆ, ಉತ್ಸವ ಇತ್ಯಾದಿಗಳಿಗೆ ಅವಕಾಶ ಕಲ್ಪಿಸುವ ತಾಣವೂ ಆಗಿದ್ದಿರಬೇಕು.

ಹಾಗೆಯೇ, ಅರಮನೆ ಆವರಣದ ಪೂರ್ವದಿಕ್ಕಿನ ಮೂಲೆಯಲ್ಲಿ ಬೃಹತ್ ಬಂಡೆಯ ಮೇಲೆ ಕೊರೆಯಲಾಗಿರುವ, ವೈಷ್ಣವ ಸಂಪ್ರದಾಯದ, ಮನುಷ್ಯ ಪ್ರಮಾಣದ ಆಂಜನೇಯನ ಚಿತ್ರವು ಸಮಕಾಲೀನವೂ ಬ್ರಹ್ಮಪುರಿ ಆವರಣದ ಎಲ್ಲೆಯ ಸೂಚಕವೂ ಆಗಿದೆಯೆನ್ನಬಹುದು.

ಅರಮನೆ ಆವರಣದ ಸ್ಮಾರಕಗಳಲ್ಲಿ ಕೆಲವು ನಾಯಕ ಅರಸರ ಪೂರ್ವಕಾಲದವೂ ಆಗಿರುವ ಲಕ್ಷಣ

---

ಚಂದ್ರಭೀಮನೆಂಬ ವಿದ್ವತ್ಕವೀಂದ್ರನು ತನ್ನ 'ಮದಕರಿರಾಜೇಂದ್ರ ದಂಡಕ'ದಲ್ಲಿ 'ಲಕ್ಷ್ಮೀ ವಿಲಾಸ' ಎಂಬುದನ್ನು ಪ್ರಸ್ತಾಪಿಸಿದ್ದು, ಇದು ಮೇಲ್ಮಹಡಿಯಲ್ಲಿದ್ದು ಕನ್ನಡಿಗಳಿಂದ ಅಲಂಕೃತವಾಗಿದ್ದಿತೆಂದು ಹೇಳಿರುವನು. ಇದನ್ನು 'ಸಜ್ಜಾಗೃಹ' ಎಂದು ಸಂಬೋಧಿಸಿರುವುದರಿಂದ ಇದು ಮುಖ್ಯ ಅರಮನೆಯ ಒಂದು ಭಾಗವಾಗಿದ್ದು, ಅರಸನಿಗೆ ಮೀಸಲಾಗಿದ್ದ ಶೃಂಗರಿಸಲ್ಪಟ್ಟ ಶಯ್ಯಾಗೃಹವಿರಬಹುದು. ಹಾಗೆಯೇ, ಅರಮನೆಯಲ್ಲಿ ದೇವರ ಮನೆಯಿದ್ದ ಪ್ರಸ್ತಾಪವೂ ಒಂದೆಡೆ ದೊರಕುತ್ತದೆ. ಚಂದ್ರಗಿರಿ ಭೀಮಾಜಿ ಪಂತನು ತನ್ನ 'ಚಿತ್ರದುರ್ಗದ ಬಖೈರ್'ನಲ್ಲಿ ಅರಮನೆಯನ್ನು 'ಮಹಲ್' ಎಂದು ಕರೆದಿದ್ದು, ಮಹಲುಗಳಿಗೆ ಸುಣ್ಣ ಹಚ್ಚಿಸಿದ ಸಂದರ್ಭವೊಂದನ್ನು ದಾಖಲಿಸಿದ್ದಾನೆ. ಇಮ್ಮಡಿ ಮದಕರಿನಾಯಕನು ಮೃತನಾದಾಗ ಆತನ ಸಮಾಧಿಯು ಆತನ ಅರಮನೆ(ಕೆಳಗಣ ಅರಮನೆ ?)ಯಲ್ಲಿ ಆಯಿತೆಂದಿದೆ. ಬೆಟ್ಟವನ್ನೇರಲು ಈಗ ಪ್ರಮುಖ ದ್ವಾರವೆನಿಸಿರುವ (ಕಾಮನಬಾವಿ ಪಕ್ಕದ) ಕೋಟೆಯ ಎದುರು ಟಿಪ್ಪುಸುಲ್ತಾನನ ಹೆಸರಿನಲ್ಲಿದ್ದ ಮಹಲ್ ಇದ್ದಿತಲ್ಲದೆ, ಈ ಮಹಲಿಗೆ ಹೊಂದಿದಂತೆ ತೋಟವೂ ಇದ್ದಿತು. ದುರ್ಗದ ಅರಮನೆಗಳನ್ನು ಕುರಿತು ಇಂತಹ ಹಲವಾರು ಸಂಗತಿಗಳನ್ನು ಸಂಗ್ರಹಿಸಬಹುದು. ಇವುಗಳ ಪ್ರತ್ಯೇಕ ಅಧ್ಯಯನ ಆಗಬೇಕಿದೆ.

31 ನಾಯಕ ಅರಸರ ಕಾಲದಲ್ಲಿ ಇಲ್ಲಿ ನಿರ್ಮಾಣಗೊಂಡ ಅರಮನೆಯ(ಒಡ್ಡೋಲಗ ಮಂದಿರ ?) ಕಾರಣದಿಂದಾಗಿ ಈ ದೇವಾಲಯದವರೆಗಿನ ಹಾದಿಯು ಆನಂತರ ಮುಚ್ಚಿಹೋದಂತೆ ಕಂಡುಬರುತ್ತದೆ.

32 ಸುಮಾರು ೧೯೨೮ರಲ್ಲಿ ಡಾ॥ ಕೃಷ್ಣ ಅವರು ಪರಿಶೀಲನಾರ್ಥ ಈ ದೇವಾಲಯಕ್ಕೆ ಭೇಟಿ ಕೊಟ್ಟಿದ್ದಾಗ, ಒಳಗಿನ ಕಟ್ಟೆಯ ಮೇಲೆ ಶಿವಲಿಂಗವೂ ಎರಡು ನಾಗರಕಲ್ಲುಗಳೂ ಇದ್ದವು – *MAR.*, 1929, p. 21.

ಗಳನ್ನು ಹೊಂದಿವೆ. ಇಲ್ಲಿರುವ ಕೊಳವನ್ನು 'ನಾಗತಿಯರ ಹರವು' ಎಂದೇ ಕರೆಯಲಾಗುತ್ತಿದ್ದು, 'ರಾಣಿಯರು ಸ್ನಾನ ಮಾಡಲು ಬಳಸುತ್ತಿದ್ದ ಹೊಂಡ'ವೆಂತಲೇ ಇದು ಪ್ರಸಿದ್ಧವಾಗಿದೆ. ಚಿತ್ರದುರ್ಗ ಬೆಟ್ಟದ ಹಿಡಿಂಬೇಶ್ವರ ದೇವಸ್ಥಾನದ ಸಮೀಪದಲ್ಲಿಯ ಕಲ್ಲಿಂದು ಸೂಚಿಸಲ್ಪಟ್ಟ, ಚಾಳುಕ್ಯ ಜಗದೇಕಮಲ್ಲನ ಕ್ರಿ.ಶ. ೧೧೮೪ರ ಶಾಸನದಲ್ಲಿ(ಚಿ. ೧೩) 'ದಕ್ಷಿಣ ಪರ್ವ್ವತ ನಾಗತೀರ್ತ್ಥ'ದ ಪ್ರಸ್ತಾಪವಿದೆ. ಡಾ॥ ಕೃಷ್ಣ ಅವರು ಚಿತ್ರದುರ್ಗ ಪರಿಸರದ ಜಲಾಶಯಗಳನ್ನು ಕುರಿತು ಹೇಳುವಾಗ, ನಾಗತೀರ್ಥವನ್ನು ಉಲ್ಲೇಖಿಸಿರುವರು. ಅವರು ಅಭಿಪ್ರಾಯಪಟ್ಟಿರುವಂತೆ, ದೊಡ್ಡಣ್ಣನ ಕೆರೆಯ ನೀರು ತಿಮ್ಮಣ್ಣನಾಯಕನ ಕೆರೆ ಮತ್ತು ಒಡ್ಡಿನ ಮೂಲಕ ಸಾಗಿ ಕೋಟೆಯ ಮೊದಲನೇ ಬಾಗಿಲ ಬಳಿಯ ನಾಗತೀರ್ಥವೆಂಬ ಕೊಳವನ್ನು ಸೇರುತ್ತಿದ್ದಿತು.[33] ನೀರನ್ನು ಹಾಯಿಸುವ ಈ ವ್ಯವಸ್ಥೆಯು ಪ್ರಾಚೀನ ಕಾಲದಿಂದಲೂ ಹೀಗೇ ಇದ್ದುದು, ಈಗಲೂ ಇರುವುದು ದಿಟವಾದರೂ ಡಾ॥ ಕೃಷ್ಣ ಅವರು ಪ್ರಸ್ತಾಪಿಸಿರುವ 'ನಾಗತೀರ್ಥದ ಕೊಳ' ಇಲ್ಲಿ ಪರಿಶೀಲನಾರ್ಹ. ರಾಮದೇವರ ಒಡ್ಡನ್ನೇ ಅವರು ನಾಗತೀರ್ಥವೆಂದು ಭಾವಿಸಿರುವರೆಂಬುದು ಸ್ಪಷ್ಟಪಡುತ್ತದೆ. ಈ ಒಡ್ಡಿನ ಸಮೀಪದ ರಾಮನಾಥ ದೇವರಗುಡಿಯ ಹಿಂಬದಿಯಲ್ಲೇ ಅವರು ಸೂಚಿಸಿರುವ ಕೋಟೆಯ ದ್ವಾರವಿದ್ದು, ಅದು ಈ ಭಾಗದ ಮೊದಲನೆಯ ದ್ವಾರವೂ ಹೌದು.

ಆದರೆ ನಾವು ಭಾವಿಸುವಂತೆ, ಶಾಸನೋಕ್ತ 'ನಾಗತೀರ್ತ್ಥ'ವೇ ಅರಮನೆ ಆವರಣದ ಇಂದಿನ ನಾಗತೇ(ತಿಯ)ರ ಹರವು [ನಾಗತೀರ್ತ್ಥ<ನಾಗತ್ತೀರ ~ ನಾಗತೇರ<ನಾಗತೀಯರ+ಹರವು (=ವಿಸ್ತರಣೆ, ಪ್ರದೇಶ)] ಆಗಿರಬೇಕು. ವರ್ಣ ಸಮೀಕರಣದಿಂದ ಉಂಟಾದ ಧ್ವನಿ ಬದಲಾವಣೆಯಿಂದಾಗಿ ಈಗಿನ ರೂಪ ಬಂದಿದೆ ಎನ್ನಬಹುದು. ಜನಪದ ನಿರುಕ್ತಿಯಿಂದಲೂ ಈ ರೂಪ ಹುಟ್ಟಿರಬಹುದು. ಹೆಸರೇ ಸೂಚಿಸುವಂತೆ, ನಾಗತೀರ್ಥವು ನಾಗಸಂಬಂಧದ ಕ್ಷೇತ್ರವಾಗಿರುವುದಲ್ಲದೆ, ಸುಬ್ರಹ್ಮಣ್ಯೇಶ್ವರನಿಗೂ ನಾಗನಿಗೂ ಇರುವ ಸಂಬಂಧದ ಹಿನ್ನೆಲೆಯಲ್ಲಿ ಈ ಕ್ಷೇತ್ರದಲ್ಲಿ ಸುಬ್ರಹ್ಮಣ್ಯೇಶ್ವರ ದೇವರ ನೆಲೆಯು ಸ್ಥಾಪನೆಗೊಂಡಿರುವ ಸಾಧ್ಯತೆ ಹೆಚ್ಚು. 'ದಕ್ಷಿಣ ಪರ್ವ್ವತ'ವೆನ್ನುವುದು ಈ ದೇವಾಲಯದ ಹಿಂಬದಿಯಲ್ಲಿರುವ ಎತ್ತರದ ನೆಲ್ಲಿಕಾಯಿ ಸಿದ್ದಪ್ಪನಬೆಟ್ಟದ ಸಾಲು ಇರಬೇಕು. ಈ ಬಗೆಗೆ ಪರಿಶೀಲಿಸಬೇಕಿದೆ.

ಗಮನಿಸಬೇಕಾದ ಇನ್ನೊಂದು ಸಂಗತಿಯೆಂದರೆ, ಅರಮನೆ ಆವರಣದ ಪೂರ್ವ ದಿಕ್ಕಿನ ಗುಡ್ಡಕ್ಕೆ ಹೊಂದಿದಂತಿರುವ ಕೋಟೆಸುತ್ತುಗಳಲ್ಲಿ 'ರಾಮದೇವರ ಒಡ್ಡಿನ ಸುತ್ತು' ಸಹಾ ಒಂದು. ಪೆರುಮಾಳೆದೇವನು ರಾಮದೇವರ ಒಡ್ಡಿಗೆ ಸನಿಹದ ಬೃಹತ್ ಬಂಡೆಯ ಅಡಿಯಲ್ಲಿ ಸ್ಥಾಪಿಸಲಾದ ರಾಮನಾಥದೇವರಿಗೆ ದತ್ತಿ ನೀಡಿದುದನ್ನು ಅಲ್ಲಿಯ ಬಂಡೆ ಶಾಸನ ಅರಹುತ್ತದೆ. ಮೇಲೆಯೇ ಪ್ರಸ್ತಾಪಿಸಿದಂತೆ, ಈ ದೇವನೆಲೆಯ ಹಿಂಭಾಗದಿಂದಲೇ ಕೋಟೆಯ ಒಳಪ್ರವೇಶಿಸಲು (ಹಾಗೂ ಹೊರಬರಲು) ಬಾಗಿಲಿದ್ದು, ಅಲ್ಲಿಂದ ಆರಂಭಗೊಳ್ಳುವ ಮಾರ್ಗವು ನೇರವಾಗಿ ಅರಮನೆ ಪರಿಸರವನ್ನು ತಲುಪುತ್ತದೆ. ಈ ಸಂಬಂಧದಲ್ಲಿ ಗಮನಾರ್ಹ ಅಂಶವೆಂದರೆ, ರಾಮದೇವರ ಒಡ್ಡಿಗೆ ಸಮೀಪದಲ್ಲಿಯೇ ವೈದಿಕವರ್ಗದವರ ರುದ್ರಭೂಮಿಯಿದ್ದು, ಅದು ಪ್ರಾಚೀನ ಕಾಲದಿಂದಲೂ ಚಾರಿತ್ರಿಕ ಮಹತ್ವದ ರುದ್ರಭೂಮಿ ಪರಿಸರವೆಂದು ಕಂಡುಬರುತ್ತದೆ. ಇಲ್ಲಿಯೇ ಹುಟ್ಟುಬಂಡೆಯೊಂದರ ಮೇಲಿರುವ ಚಕ್ರ-ಶಂಖ ಹಾಗೂ ತ್ರಿಪುಂಡ್ರ ಲಾಂಛನ ಸಹಿತವಿರುವ ೧೫೦ ಸೆಂ ಮೀ. ಎತ್ತರದ ಏಳು ಹೆಡೆಯ ಆದಿಶೇಷನ ಉಬ್ಬುಶಿಲ್ಪವು ಅತಿ ಮುಖ್ಯವಾದುದು. ಶ್ರೀವೈಷ್ಣವ ಪಂಥದ ಪ್ರಭಾವವು ಇಲ್ಲಿ ಉಂಟಾಗಿರುವುದು ಸ್ಪಷ್ಟ. ಈ ಶಿಲ್ಪದ ಮೂಲ ಆಶಯ ಏನಿರಬಹುದೆಂಬುದು ಸ್ಪಷ್ಟಪಡದಿದ್ದರೂ ಶೇಷಾಂಶರಾದ ರಾಮಾನುಜರು ಹಾವಿನ ರೂಪವನ್ನು ತಳೆದಿದ್ದರೆಂಬ ಐತಿಹ್ಯವನ್ನು[34] ವ್ಯಕ್ತಪಡಿಸುವುದರೊಡನೆ ಈ ಕ್ಷೇತ್ರಕ್ಕೆ 'ರಾಮಾನುಜ ರಕ್ಷೆ'ಯ ಸಂಕೇತವಾಗಿಯೂ

33 *Ibid*, p. 17

34 ಎಸ್. ಕೆ. ರಾಮಚಂದ್ರರಾವ್ : ತಿರುಪತಿ ತಿಮ್ಮಪ್ಪ, ಬೆಂಗಳೂರು, ೧೯೮೦, ಪು. ೫೩ ; ಇದಕ್ಕೆ ಶಿಲ್ಪಸಾಕ್ಷ್ಯವೂ ಇದೆ— ನೋಡಿ : *MAR.*, 1939. p. 28 : ತಮ್ಮ ಮತಲಾಂಛನ ಸಹಿತರಾದ ಹಾಗೂ ಪದ್ಮಾಸನ ಭಂಗಿಯಲ್ಲಿರುವ ರಾಮಾನುಜರ ಉಬ್ಬುಶಿಲ್ಪವೊಂದು ಮಂಡ್ಯ ಜಿಲ್ಲೆ, ತೊಣ್ಣೂರಿನ ಯೋಗಾನರಸಿಂಹ ದೇವಾಲಯದ ನವರಂಗದ ಈಶಾನ್ಯ ಮೂಲೆಯಲ್ಲಿದ್ದು, ಈ ಬಿಂಬದ ಶಿರೋಭಾಗದಲ್ಲಿ ಏಳುಹೆಡೆಯ ಆದಿಶೇಷನನ್ನು ಬಿಡಿಸಲಾಗಿದೆ.

ಈ ಶಿಲ್ಪ ಮೂಡಿದ್ದಿರಬಹುದು. ಅಲ್ಲದೆ, ಈ ಪರಿಸರದಲ್ಲಿ ಹೊಯ್ಸಳರ ಅವಧಿಯ ಹಲವಾರು ಜೈನ ನಿಸದಿಗೆ ಬರಹಗಳು ಬೆಳಕಿಗೆ ಬಂದಿವೆಯೆನ್ನುವುದೂ ಗಮನೀಯ. ಆದಿಶೇಷನ ಉಬ್ಬುಶಿಲ್ಪವುಳ್ಳ ಬಂಡೆಯ ಹಿಂಬದಿಯಲ್ಲೇ ಹುಟ್ಟುಬಂಡೆಯ ಮೇಲೆ ಇಂತಹ ನಿಸದಿಗೆ ಬರಹವೂ ಸನಿಹದಲ್ಲಿ ಮತ್ತೆ ಕೆಲವು ಬರಹಗಳೂ ಕಂಡು ಬಂದಿರುವುದು ಕುತೂಹಲಕಾರಿಯಾಗಿದೆ. ಇವುಗಳ ಹಿನ್ನೆಲೆಯಲ್ಲಿ, ಇಲ್ಲಿಯ ರಾಮದೇವರ ನೆಲೆ ಮತ್ತು ಸ್ಮಶಾನದ ನೆಲೆಗಳಿಗೂ ಬ್ರಹ್ಮಪುರಿಯ ವಿದ್ವಾಂಸವರ್ಗ ಹಾಗೂ ಅವರ ಪರಿವಾರಕ್ಕೂ ಇದ್ದ ಸಂಬಂಧ ಕುರಿತು ಆಲೋಚಿಸಬಹುದಾಗಿದೆ.

**ಶೃಂಗಾರತೋಟ :** ಶ್ರೀವೈಷ್ಣವ-ವೈಷ್ಣವ ಕ್ಷೇತ್ರಗಳಲ್ಲಿ ದೇವಾಲಯಕ್ಕೆ ಸಂಬಂಧಿಸಿದ ತೋಟ/ವನಗಳಿಗೆ ಇರುವ ಹೆಸರುಗಳಲ್ಲಿ ಶೃಂಗಾರತೋಟವೆಂತಲೂ ತುಳಸಿತೋಟವೆಂತಲೂ ಇರುವುದುಂಟು. ಶ್ರೀವಿಷ್ಣು ಮತ್ತು ತುಳಸಿಯರ ಆಧ್ಯಾತ್ಮಿಕ ಸಂಬಂಧದ ದ್ಯೋತಕವಾಗಿ ತುಳಸಿತೋಟವನ್ನು ಗುರುತಿಸಲಾಗುತ್ತದೆ.[35] ತುಳಸಿಯನ್ನು 'ಶೃಂಗಾರ ಪತ್ರ'ವೆಂತಲೂ ಕರೆಯಲಾಗಿದ್ದು, ಕೇಶವನಿಗೆ ಸಂಬಂಧಿಸಿದಂತೆ ಇದರ ಪ್ರಸ್ತಾಪ ಬರುತ್ತದೆ. 'ಶೃಂಗಾರಶೀಲ'ನಾದ ವೇಣುಗೋಪಾಲನಿಗೂ 'ಶೃಂಗಾರತೋಟ'ಕ್ಕೂ ಇರುವ ನಂಟು ಈ ಬಗೆಯದು. 'ಗಣಪತಿ ಹುಟ್ಟಿನ ಐತಿಹ್ಯ'ದ ಸಂಬಂಧದಲ್ಲಿ ಶಿವ-ಶಿವೆಯರು 'ಶೃಂಗಾರತೋಟ'ದಲ್ಲಿದ್ದ ಸಂದರ್ಭವನ್ನು ಶಾಂತಲಿಂಗ ದೇಶಿಕನು ತನ್ನ ಕಾವ್ಯದಲ್ಲಿ ಪ್ರಸ್ತಾಪಿಸಿರುವುದನ್ನು ಸಹಾ ಇಲ್ಲಿ ಗಮನಿಸಬಹುದು.[36]

'ಶೃಂಗಾರ' ಎಂಬುದರಿಂದ ರೂಪುಗೊಂಡಿರಬಹುದಾದ ಹಲವಾರು ಊರುಗಳು ಕರ್ನಾಟಕದಲ್ಲಿವೆ. ಅವುಗಳಲ್ಲಿ 'ಶೃಂಗಾರಪುರೀ' ಎಂಬುದು ಶಾಸನೋಕ್ತ (ಆಲೂರು_ಹಾಸನ, ೪೧). ಈಗ ಬಳಕೆಯಲ್ಲಿರುವ ಕೆಲವು ಸ್ಥಳನಾಮಗಳೆಂದರೆ ಶೃಂಗಾರಪುರ, ಶೃಂಗಾರ ಸಾಗರ (ಅಗ್ರಹಾರ), ಶೃಂಗಾರತೋಟ (ಶುಂಗರ ತೋಟ),[37] ಶೃಂಗಾರಬಾಗು, ಶೃಂಗಾರಕಟ್ಟೆ, ಶಿಂಗಾರ ಕೊಪ್ಪ, ಶಿಂಗರವಳ್ಳಿ, ಸಿಂಗರಹಳ್ಳಿ, ಸಿಂಗಾರಗಾಂವ ಇತ್ಯಾದಿ.

---

35 ಬೆಂಗಳೂರಿನ ಅಕ್ಕಿಪೇಟೆ ವ್ಯಾಪ್ತಿಗೆ ಬರುವ ತುಳಸಿತೋಟವು (ಚಿಕ್ಕ ಲಾಲ್‌ಬಾಗ್) ಹಿಂದಿನ ಧರ್ಮಾಂಬುಧಿ ಕೆರೆಯ ಏರಿಗೆ ಹೊಂದಿಕೊಂಡಿದ್ದು, ಪ್ರಸನ್ನ ಕೃಷ್ಣಸ್ವಾಮಿ (ನವನೀತ ಕೃಷ್ಣ), ಲಕ್ಷ್ಮೀನರಸಿಂಹ, ಶ್ರೀರಾಮ ಮೊದಲಾದ ದೇವರುಗಳನ್ನೊಳಗೊಂಡ ಶ್ರೀ ವೈಷ್ಣವ ನೆಲೆಯಾಗಿರುವುದನ್ನು ಗಮನಿಸಬಹುದು.

36 ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರ ರತ್ನಾಕರ, ಭಾಗ ೧, ಪು. ೧೪

37 ಇದು ಬಳ್ಳಾರಿ ಜಿಲ್ಲೆ, ಹರಪನಹಳ್ಳಿಗೆ ೪ ಕಿ. ಮೀ. ದೂರದಲ್ಲಿದೆ. ಈ ಊರು ಇಂದಿಗೂ ದುಂಡು ಮಲ್ಲಿಗೆ, ಸೂಜಿ ಮಲ್ಲಿಗೆ, ಕನಕಾಂಬರ, ಸೇವಂತಿಗೆಯಂತಹ ಹೂ ಬೆಳೆಗೆ ಪ್ರಸಿದ್ಧಿ ಪಡೆದಿದೆ. ಇಲ್ಲಿ ಆಂಜನೇಯ, ಬಸವಣ್ಣ ಮತ್ತು ದುರ್ಗಮ್ಮರ ಗುಡಿಗಳು ಮಾತ್ರ ಇವೆ. ಹಿಂದೆ ಹರಪನಹಳ್ಳಿಯ ದೊರೆ ಸೋಮಶೇಖರನಾಯಕನ ಮಗಳು ಇಲ್ಲಿಯ ತೋಟಕ್ಕೆ ಬರುತ್ತಿದ್ದಳಂತೆ. ಇಲ್ಲಿಯ ಶಾನುಬೋಗ (ಹರಪನಹಳ್ಳಿಯ ಜೋಯಿಸರ ಓಣಿಯ ನಿವಾಸಿ)ಮೋಹನರಾವ್ ಅವರ ಪ್ರಕಾರ, ಈ ಗ್ರಾಮವು ವೈಷ್ಣವ ಕ್ಷೇತ್ರವಲ್ಲ ; ಹರಪನಹಳ್ಳಿ ಸಮೀಪದ ತಿಮ್ಮಲಾಪುರದ ವೆಂಕಟೇಶ್ವರ ದೇವರಿಗೂ ಈ ಊರಿಗೂ ಯಾವುದೇ ಸಂಬಂಧವಿಲ್ಲ.

ಹರಪನಹಳ್ಳಿಯು ಪೂರ್ವದಿಂದಲೂ ಮಾಧ್ವ ಸಂಪ್ರದಾಯದವರ ಕೇಂದ್ರವಾಗಿದೆಯೆನ್ನುವುದೂ, ಅವರ ಸಂಖ್ಯೆ ಹೆಚ್ಚಾಗಿರುವುದು ಗಮನಾರ್ಹ. ಇಲ್ಲಿ ವಾದಿರಾಜ, ಮಧ್ವಾಚಾರ್ಯ, ಶಂಕರಾಚಾರ್ಯ ಮತ್ತು ರಾಘವೇಂದ್ರಸ್ವಾಮಿ ಮಠಗಳಿವೆ. ಈ ಹಿನ್ನೆಲೆಯಲ್ಲಿ, ನಾವು ಭಾವಿಸುವಂತೆ, ತಿಮ್ಮಲಾಪುರದ ವೆಂಕಟೇಶ್ವರ ದೇವರಿಗೂ ಶೃಂಗಾರತೋಟ ಗ್ರಾಮಕ್ಕೂ ಸಂಬಂಧ ಇದ್ದಿರಬೇಕಲ್ಲದೆ, ಇದಕ್ಕೂ ಪೂರ್ವದಲ್ಲಿ ಶೃಂಗಾರತೋಟದ ಹೆಸರು ಬಳಕೆಯಲ್ಲಿದ್ದಿರಬೇಕು. ವೆಂಕಟೇಶ್ವರ ದೇವಾಲಯಕ್ಕೂ ಶೃಂಗಾರತೋಟಕ್ಕೂ ಅಡ್ಡರಸ್ತೆಯ ಮೂಲಕ ಕಂಡುಬರುವ ಅಂತರ ಸುಮಾರು ೪-೫ ಕಿ.ಮೀ. ಮಾತ್ರ. ಈ ಬಗೆಗೆ ಅಧಿಕ ಮಾಹಿತಿ ಸಂಗ್ರಹಿಸಬೇಕಿದೆ. ಇಲ್ಲಿಯ ಕೆಲವು ಸಂಗತಿಗಳನ್ನು ಚರ್ಚಿಸುವಲ್ಲಿ ಸಹಕರಿಸಿದವರೆಂದರೆ ಹರಪನಹಳ್ಳಿಯ ಕುಂ. ಬಾ. ಸದಾಶಿವಪ್ಪ ಅವರು.

ಚನ್ನಗಿರಿ ತಾಲ್ಲೂಕು 'ಶೃಂಗಾರಬಾಗು' ಎಡೆಯನ್ನು ಸಹಾ ಈ ದೃಷ್ಟಿಯಿಂದ ಗಮನಿಸಬೇಕಿದೆ.

ಚಿತ್ರದುರ್ಗ ಜಿಲ್ಲೆ, ಹೊಸದುರ್ಗ ತಾಲ್ಲೂಕಿನ ಬಾಗೂರಿನಲ್ಲಿ ಕ್ರಿ.ಶ. ೧೫೧೫ರಲ್ಲಿ ಮಲ್ಲರಸಯ್ಯನೆಂಬುವನು 'ಸಿಂಗರತೋಪು' ('ಮಲ್ಲರಸನ ತೋಪು') ಮಾಡಿಸಿದನೆಂದು ಶಾಸನದಲ್ಲಿ ಹೇಳಿದೆ.[38] ಇಲ್ಲಿ ಚನ್ನಕೇಶವ (ಚೆಂನಿಗರಾಯ)ನ ದೇವಾಲಯವಿದ್ದು, ಈ ದೇವರಿಗೆ 'ಪಂಚಪರ್ವ' ಮೊದಲಾದ ಉತ್ಸವಗಳು ನಡೆಯುತ್ತಿದ್ದವೆಂದು ಸಹಾ ಅಲ್ಲಿಯೇ ಪ್ರಸ್ತಾಪಿಸಿದೆ. ಹಾಗೆಯೇ ಹೈದರ್‌ಅಲಿ ಖಾನನು ಶ್ರೀರಂಗಪಟ್ಟಣದಲ್ಲಿ "ಉಭಯ ಕಾವೇರಿ ಮಧ್ಯ ಯೆರಡು ಶ್ರುಂಗಾರ ತೋಟ ಹೊಸ್ತಾಗಿ ನಿರ್ಮಿಶಿ ಲಾಲಬಾಗ ದರಿಯಾದವಲತ್ತು ಬಾಗೂಯೆಂದು ಹೆಸರಿಟ್ಟು" ಈ ತೋಟಗಳನ್ನು ಅಭಿವೃದ್ಧಿಪಡಿಸಿದುದರ ಬಗೆಗೆ ನಲ್ಲಪ್ಪನು ತನ್ನ 'ಹೈದರ್‌ನಾಮಾ'ದಲ್ಲಿ ಹೇಳಿದ್ದಾನೆ.[39] ಶ್ರುಂಗಾರತೋಟವೆಂಬುದು ಪೂರ್ವದಲ್ಲಿಯೇ ಇಲ್ಲಿಯ ಶ್ರೀರಂಗನಾಥ ಮತ್ತು ಲಕ್ಷ್ಮೀನರಸಿಂಹ ದೇವರುಗಳಿಗೆ ಮೀಸಲಾದ ಹೂದೋಟವಾಗಿದ್ದಿರಬಹುದು. ಹಂಪೆಯ ಪರಿಸರದಲ್ಲಿರುವ ಸಿಂಗಾರದ ಹೆಬ್ಬಾಗಿಲು (Monumental Gate)ಮತ್ತು ಸಿಂಗಾರ ಪುರಗ್ರಾಮ ಇವುಗಳನ್ನೂ ಗಮನಿಸಬೇಕು. ಈ ಎಲ್ಲವುಗಳ ಹಿನ್ನೆಲೆಯಲ್ಲಿ ಶ್ರೀವೈಷ್ಣವ-ವೈಷ್ಣವ ಧಾರ್ಮಿಕ ಪ್ರಭಾವ ಇರುವುದನ್ನು ಗುರುತಿಸಬಹುದು.

ತಮಿಳುನಾಡಿನಲ್ಲಿ ವೇಣುಗೋಪಾಲ ದೇವರಿಗೆ ಸಂಬಂಧಿಸಿದ ಹೂದೋಟವನ್ನು ಮಾತ್ರ ಶೃಂಗಾರ ತೋಟವೆಂದು ಕರೆಯುವುದಾಗಿ ವ್ಯಕ್ತಪಡುತ್ತದೆ.[40]

ಪೆರುಮಾಳೆದೇವನು ಚಿತ್ರದುರ್ಗ ಬೆಟ್ಟದಲ್ಲಿ ತಾನು ಮಾಡಿದ ಪುರದಲ್ಲಿ ಬ್ರಾಹ್ಮಣ ವಿದ್ವಾಂಸರ ಜೀವನಕ್ಕೆ ವ್ಯವಸ್ಥೆಗೊಳಿಸಿದಂತೆಯೇ ಗೋಪಾಲ ದೇವರಿಗೆ ಹೂದೋಟವನ್ನು ಮಾಡಿಸಿದನೆಂಬುದಕ್ಕೆ ಇಲ್ಲಿಯ ಶೃಂಗಾರತೋಟದ ಬಯಲೇ ಸಾಕ್ಷಿಯಾಗಿದೆ. ಈ ತೋಟಕ್ಕೆ ನೀರು ಹಾಯಿಸಲು ಗೋಪಾಲಸ್ವಾಮಿ ಹೊಂಡದ ದಕ್ಷಿಣದಂಡೆಯ ಪಶ್ಚಿಮದ ಮೂಲೆಯಲ್ಲಿ ಪ್ರಾಚೀನ ಪದ್ಧತಿಯ ನೀರಿನ ಕಾಲುವೆಗಳಿರುವುದನ್ನೂ ನೀರನ್ನು ಹೊಂಡದಿಂದ ಎತ್ತಿಹಾಯಿಸಲು ಇಲ್ಲಿಯ ಕಟ್ಟೆಯಲ್ಲಿಯೇ ಅಳವಡಿಸಿರುವ ಕಲ್ಲುತೊಲೆಗಳಿಂದ ನಿರ್ಮಿಸಿರುವ ನೀರುಗುಂಡಿಗಳನ್ನೂ ಗಮನಿಸಬಹುದು. (ನಾಯಕ ಅರಸರ ಕಾಲದಲ್ಲಿ ಮತ್ತು ಇತ್ತೀಚೆಗೆ ನಿರ್ಮಿಸಲಾಗಿರುವ ಎರಡು ಏತದ ಕಟ್ಟೆಗಳು ಇದೇ ದಂಡೆಯ ಪೂರ್ವದಿಕ್ಕಿನ ಮೂಲೆಯಲ್ಲಿ ಉಳಿದುಬಂದಿವೆ).

ಶೃಂಗಾರತೋಟದ ಮೂಲಸ್ವರೂಪವು ಹೇಗಿದ್ದಿತೋ ತಿಳಿದುಬರುವುದಿಲ್ಲ. ಆದರೆ ಈಚಿನವರೆವಿಗೂ ಇಲ್ಲಿಯ ತೋಟವು ಉಳಿದು ಬಂದಿದ್ದಿತೆನ್ನುವುದಕ್ಕೆ ಪುರಾವೆಗಳಿವೆ. ನಾಯಕ ಅರಸ ಬಿಚ್ಚುಗತ್ತಿ ಭರಮಣ್ಣ ನಾಯಕನು ತನ್ನ ಆಳ್ವಿಕೆಯಲ್ಲಿ ಮೇಲುದುರ್ಗ(ಬೆಟ್ಟ ಮತ್ತು ಕೋಟೆಯ ಪ್ರದೇಶ)ದಲ್ಲಿ ದೊಡ್ಡತೋಟ ಮತ್ತು ಶೃಂಗಾರತೋಟಗಳನ್ನು ಮಾಡಿಸಿದನೆಂದು ಚರಿತ್ರೆಯಲ್ಲಿ ಹೇಳಿದೆ. ಬೆಟ್ಟದ ಮೇಲೆ ಒಂದೆರಡು ತೋಟದ ಬಯಲುಗಳು ಕಂಡುಬಂದರೂ ಅವುಗಳ ಕ್ಷೇತ್ರ ಶೃಂಗಾರತೋಟದಷ್ಟು ವಿಸ್ತಾರವಾದುದಲ್ಲ. ಆದರೆ ಈ ಅರಸನ ಕಾಲದಲ್ಲೆ ಮೇಲುದುರ್ಗದಲ್ಲಿ 'ಕರೇಕಲ್ಲು ಹೊಂಡ'ವನ್ನು ಮಾಡಿಸಲಾಯಿತೆಂತಲೂ ಹೇಳಿದ್ದು, ಗೋಪಾಲಸ್ವಾಮಿ ಹೊಂಡವನ್ನು ಈ ಹೆಸರಿನಿಂದಲೂ ಕರೆಯುವುದು ವಾಡಿಕೆ. ಈ ಹೊಂಡದ ವಾಸ್ತುವನ್ನು ಗಮನಿಸಿದರೆ, ಇದರ ಉತ್ತರದ ದಂಡೆಯನ್ನು ವಿಸ್ತರಿಸಿ ಕಟ್ಟಿರುವ ಲಕ್ಷಣಗಳಿವೆ. (ಇದರ ರಚನೆಗೂ ದಕ್ಷಿಣ ದಂಡೆಯ ಕಟ್ಟೆಯ ರಚನೆಗೂ ಅಗಾಧ ವ್ಯತ್ಯಾಸವಿದೆ).[41] ಇಲ್ಲಿ ನಿರ್ಮಿಸಲಾಗಿರುವ ಅಡ್ಡಗಟ್ಟೆ (ಕೋಡಿಕಟ್ಟೆ)ಯಲ್ಲಿ ಸುಂದರವಾದ ಏತಗಟ್ಟೆ ಮತ್ತು

---

38 *EC.*, XI. Holalkere, 119

39 ತಿ. ತಾ. ಶರ್ಮ (ಸಂ.) : ಚಾರಿತ್ರಿಕ ದಾಖಲೆಗಳು, ಬೆಂಗಳೂರು, ೧೯೭೧, ಪು. ೩೯-೪೦

40 ಈ ಸಂಗತಿಯನ್ನು ನನಗೆ ತಿಳಿಸಿದವರು ಅ. ಲ. ನರಸಿಂಹನ್ ಅವರು.

41 ಈ ಹೊಂಡ ಪರಿಸರದ ಬಂಡೆಗಳನ್ನು ಪರಿಶೀಲಿಸಿದರೆ, ಈಗಿನ ರಚನೆಗಿಂತ ಭಿನ್ನವಾಗಿದ್ದ ಮೂಲರಚನೆಯ ಯೋಜನೆಯು ಆಗಿನವರಿಗೆ ಇದ್ದಿತೆಂಬುದು ಮನದಟ್ಟಾಗುತ್ತದೆ. ಅದಕ್ಕೆ ಸಂಬಂಧಿಸಿದ ಕುರುಹುಗಳು ಈ ಬಂಡೆಗಳ ಮೇಲೆ ಸ್ಪಷ್ಟವಾಗಿ ಗೋಚರಿಸುತ್ತವೆ. ಹಿಂದಿನಿಂದಲೂ ಶೃಂಗಾರತೋಟ ಮೊದಲಾದವುಗಳಿಗೆ ನೀರೊದಗಿಸುತ್ತ ಬಂದ ಹಾಗೂ ಇಂದಿಗೂ ಉಪಯುಕ್ತವಾಗಿರುವ ಈ ಹೊಂಡವು ಯಾವ ಕಾಲಕ್ಕೂ ಬತ್ತಿಹೋಗದಿರುವುದು ನಿಸರ್ಗವು ಕರುಣಿಸಿದ ವರವೆನಿಸಿದೆ.

ಕೋಡಿಬಾಗಿಲುಗಳನ್ನು ಅಳವಡಿಸಲಾಗಿದ್ದು, ಈ ಕಟ್ಟೆಗೆ ಹೊಂದಿಕೊಂಡಿರುವ ಬಯಲಿನಲ್ಲಿ ಇದ್ದ ವನವನ್ನೇ 'ದೊಡ್ಡ ತೋಟ' ಎಂದಿರಬಹುದು. (ಇಲ್ಲಿಯೂ ಈಚಿನವರೆಗೆ ತೋಟ ಮಾಡಲಾಗುತ್ತಿದ್ದಿತು).

ಭರಮಣ್ಣನಾಯಕನು ಶೃಂಗಾರತೋಟವನ್ನು ಮಾಡಿಸಿದನೆಂಬ ಸಂಗತಿಯು, ಆತನು ಆ ತೋಟವನ್ನು ಅಭಿವೃದ್ಧಿ ಪಡಿಸಿದ ಬಗೆಗೆ ಸೂಚ್ಯವಾಗಿ ಹೇಳಿದಂತಿದೆ, ಅಷ್ಟೆ. ಶೃಂಗಾರತೋಟವನ್ನು 'ಮಹಲ್‌ತೋಟ'ವೆಂತಲೂ ಕರೆಯಲಾಗುತ್ತಿದ್ದಿತೆಂದು ತಿಳಿದಿರುವುದರಿಂದ ಅರಸರು ಈ ತೋಟದ ಸಂಧಾರಣೆಗೆ ಗಮನಹರಿಸುತ್ತಿದ್ದುದು ಸಹಜ.[42] ಈ ತೋಟದ ಬಯಲು ಇತ್ತೀಚಿನವರೆಗೆ ಫಲ–ಪುಷ್ಪಭರಿತ ಮರ–ಗಿಡಗಳಿಂದ ತುಂಬಿದ್ದುದು ವಿಶೇಷವಾದುದು.[43]

ಪಂಚಕೇಶ್ವರದ ಯಿಂದ್ರಪರ್ವ್ವದ ಧರ್ಮ : ಪೆರುಮಾಳೆದೇವನು ತಾನು ಮಾಡಿದ ಪುರದಲ್ಲಿ ನಡೆಸುವ 'ಪಂಚಕೇಶ್ವರದ ಅಯಿಂದ್ರ ಪರ್ವ್ವದ ಧರ್ಮ್ಮಕ್ಕೆ' ತಾನು ಮಾಡಿದ ಪೆರುಮಾಳೆಸಮುದ್ರದ ಕೆರೆಯ ಕೆಳಗೆ ಸ್ವಲ್ಪ ಭೂಮಿಯನ್ನು ದತ್ತಿಯಾಗಿ ಬಿಟ್ಟಿದ್ದು, ಆ ಬಗೆಗೆ ತಾನು ಹಾಕಿಸಿದ ಶಾಸನದಲ್ಲಿಯೂ (ಚಿ. ೧೨) ಕಾಣಿಸಿದ್ದಾನೆ. ಇಲ್ಲಿ 'ಪಂಚಕೇಶ್ವರ' ಎಂಬುದು ಒಂದು ಧಾರ್ಮಿಕ ವಿಧಿಯೆಂದೇ ಬಹುಪಾಲು ಶಾಸನಗಳಲ್ಲಿ ಉಕ್ತವಾಗಿದೆ.[44] ಮುಖ್ಯವಾಗಿ, ಇದು ಶ್ರೀವೈಷ್ಣವ–ವೈಷ್ಣವ ಧಾರ್ಮಿಕ ಉತ್ಸವವಾಗಿ ಕಂಡುಬರುತ್ತದೆ,

ಪೆರುಮಾಳೆದೇವನು ತನ್ನ ಜಹಗೀರಿಯಾದ 'ಉದ್ಭವ ನರಸಿಂಹಪುರವಾದ ಬೆಳ್ಳೂರಿನ' ಶ್ರೀಮದಗ್ರಹಾರದಲ್ಲಿ ಪಂಚಕೇಶ್ವರದ ಉತ್ಸವ ಮತ್ತು ಆರಣ

---

42 'ಚಿತ್ರದುರ್ಗದ ಬಖೈರ್'ನಲ್ಲಿ ಹೇಳಿರುವಂತೆ, ಕಿಲ್ಲೆಯ ಉಪವನ(ಉದ್ಯಾನ)ದಲ್ಲಿ ಬಹಳವಾಗಿ ಮಲ್ಲಿಕಾ, ಜಾಜಿ, ಪಂಚ ಗುಲಾಬ್, ಕಮಲ ವಗೈರೆ ಪುಷ್ಪಗಳಿದ್ದು, ಇವುಗಳ ಸುವಾಸನೆಯಿಂದ ಮನಸ್ಸು ಹರ್ಷಾಯಮಾನವಾಗುತ್ತಿದ್ದಿತು. ಇಲ್ಲಿ ನಾನಾ ಜಾತಿಯ ಪಕ್ಷಿಗಳಿದ್ದವು (ಪು. ೬೬). 'ಮದಕರಿರಾಜೇಂದ್ರ ದಂಡಕ'ದಲ್ಲಿ, ಈ ಗಿರಿಯಲ್ಲಿಯ 'ರಂಭಾ ಕದಂಬಾದಿ ನಾನಾ ಲತಾ ಪದ್ಮ ಕರೋದ್ಯಾನ ರೇಖಾ'ದ ವರ್ಣನೆಯಿದೆ.

43 ಸುಮಾರು ೮೦ ವರ್ಷಗಳ ಹಿಂದೆ ದುರ್ಗದ ಚಪ್ಪೆಚಾವಡಿ ದಳವಾಯಿಗಳ ಮನೆತನದ ದಿವಂಗತ ಸಿ. ಪರಶುರಾಮನಾಯಕ ಅವರ ತಂದೆಯವರು ಇಲ್ಲಿ ತೋಟಗಾರಿಕೆಯ ಗುತ್ತಿಗೆ ಹಿಡಿದಿದ್ದ ಸಂದರ್ಭದಲ್ಲಿ ಇದ್ದ ಈ ತೋಟದ ಸ್ಥಿತಿಯೆಂದರೆ, ಆಗ ಇಲ್ಲಿ ಕೊಬ್ಬರಿಮಾವು, ಅಡಿಕೆಮಾವು, ಕಸಿಮಾವು, ದೊರೆತಿನ್ನೋಮಾವು, ಮೂಲೆ(ಜೇನುತುಪ್ಪದ)ಮಾವು, ಜೀರಿಗೆ ಮಾವು, ಅಂಬಲಿಮಾವು, ಚಂದ್ರಮಾವು — ಈ ವಿವಿಧ ಬಗೆಯ ಮಾವಿನ ಜಾತಿಯ ಮರಗಳೂ ಜಾಜಿ, ಪಾರಿಜಾತ, ನನ್ನಿಬಟ್ಲು, ಸೇವಂತಿಗೆ, ಮರುಗ, ದಾಸವಾಳ(ಬಿಳಿ ಮತ್ತು ಕೆಂಪು), ಸುತ್ತು ಮಲ್ಲಿಗೆ, ಕಸ್ತೂರಿ ಜಾಲಿ, ಗುಲಾಬಿ, ಇತ್ಯಾದಿ ಹೂವಿನ ಗಿಡಗಳೂ ಬೆಳೆದಿದ್ದುವು. ಈ ಮಾವಿನ ವೃಕ್ಷಜಾತಿಯ ಸಸಿಗಳನ್ನು ಅನಂತರ ತಿಮ್ಮಣ್ಣನಾಯಕನ ಕೆರೆಯ ಅಂಗಳದಲ್ಲಿ ನೆಡಲಾಯಿತಂತೆ.

ಚಿತ್ರದುರ್ಗದ ಚೆಟ್ಟಿಗಳ ವಂಶಸ್ಥರಾದ ಸಿ. ಎಂ. ನರಸಿಂಹಚೆಟ್ಟಿ ಅವರು ಹೇಳುವಂತೆ, ಈಗ ಹೈದರಾಬಾದ್ ಕಡೆಗೆ ಬೆಳೆಯಲಾಗುತ್ತಿರುವ, ತುಂಬಾ ರುಚಿಕರವಾಗಿದ್ದು ಚಪ್ಪಟೆಯಾಕಾರದಲ್ಲಿರುವ 'ದೊಡ್ಡ/ಸಣ್ಣ ದಬ್ಬೆಗ' ಜಾತಿಯ ಮಾವಿನ ಹಣ್ಣಿನ ಮರಗಳನ್ನು ಇಲ್ಲಿ ಬೆಳೆಸಲಾಗಿದ್ದಿತು. ಅಲ್ಲದೆ, ಮೇಲುದುರ್ಗದ ತೋಟಗಳಲ್ಲಿ ವಿಪುಲವಾಗಿ ನೀಲಿ ಹೂ ಬಿಡುವ ಅಸಂಖ್ಯಾತ ಪಾದರಿ ವೃಕ್ಷಗಳಿದ್ದವು.

ಸುಮಾರು ೧೯೧೭ರಲ್ಲಿ ಈ ತೋಟ(ಶೃಂಗಾರವನ)ದ ಪರಿಸ್ಥಿತಿಯನ್ನು ಸ್ವತಃ ಕಂಡಿದ್ದ ಟಿ. ಕೃಷ್ಣರಾಯರು ದಾಖಲಿಸಿರುವುದು : "....ಇಲ್ಲಿ ಈಗ ಒಂದು ಮಾವಿನತೋಪು ಮಾತ್ರವಿದೆ. ಈ ಮರಗಳ ಗುಂಪಿನಲ್ಲಿ ಬಿಸಿಲುಕಾಲದಲ್ಲಿಯೂ ತಂಪಾದ ಆಶ್ರಯವು ದೊರೆಯುವುದು. ಬೆಟ್ಟವನ್ನು ನೋಡಲು ಬಂದ ಜನರೆಲ್ಲರೂ ಈ ಶೃಂಗಾರವನದಲ್ಲಿ ಬಿಡಾರವನ್ನು ಮಾಡಿಕೊಂಡು ಭೋಜನೋಪಹಾರಗಳಿಂದ ಕಾಲವನ್ನು ಕಳೆಯುವರು" — ಚಿತ್ರದುರ್ಗದ ಬೆಟ್ಟ ಮತ್ತು ನಾಯಕ ಸಾಮ್ರಾಜ್ಯ, ಬೆಂಗಳೂರು, ೧೯೫೭, ಪು. ೨೯-೩೦.

44 *MAR.*, 1927, Salur (Shimoga), 151, 870 A.D. ; *EC.*, VII (NS), Nagamangala 83, 1269 A.D. ; 74, 1271 A.D. ; 76, 1309 A.D.

ಪೂಜೆಗೆ ಏರ್ಪಾಟು ಮಾಡಿದುದು ಶಾಸನದಿಂದ ವ್ಯಕ್ತಪಡುತ್ತದೆ.[45] ಅಲ್ಲದೆ, ಈತನೇ ತಲಕಾಡಿನ ವೈದ್ಯನಾಥದೇವರ 'ಪಂಚಪರ್ವ್ವ'ಕ್ಕೆ ದತ್ತಿಬಿಟ್ಟಿದ್ದ ಬಗೆಗೆ ಕ್ರಿ.ಶ. ೧೪೪೦ರ ಶಾಸನವೊಂದು ಗುರುತಿಸುತ್ತದೆ.[46]

ಒಂದು ಪಡಿ (ಅರ್ಧಸೇರು) ಹೊನ್ನನ್ನು ಸಂಗ್ರಹಿಸಿ 'ಪಂಚಕೇಶ್ವರ'ವನ್ನು ಮೆರವಣಿಗೆ ಮಾಡಿಸಿ ನಂತರ ಮಂತ್ರಗಳನ್ನು ಹೇಳಿಸಿ ಆ ಹೊನ್ನನ್ನು ಪೂಜಿಸುವ ಒಂದು ಸಂಪ್ರದಾಯವೇ ಇದು.[47] ಸಂಗ್ರಹಿಸಿದ ಹೊನ್ನನ್ನು ದೇವಕಾರ್ಯ/ಉತ್ಸವಕ್ಕೆ ಉಪಯೋಗಿಸುತ್ತಿದ್ದರೆಂದು ತೋರುತ್ತದೆ. ಬೇಲೂರಿನ ಶಾಸನವೊಂದರಲ್ಲಿ ಬರುವ "ಹೊಯ್ಸಳೇಶ್ವರ ದೇವರ ಪಂಚಕೇಶ್ವರದ ವೋದಿದ ಬ್ರಾಹ್ಮಣರ ಪೂಜೆಗೋಸಂಗ" ಎಂಬ ಉಲ್ಲೇಖವನ್ನು[48] ಇಲ್ಲಿ ಗಮನಿಸಬಹುದು.

'ಯಿಂದ್ರಪರ್ವ'ದ ಪ್ರಸ್ತಾಪದಲ್ಲಿ, 'ಪರ್ವ' (ಕ. ಪರೇವು, ಪರವ್ವ, ಪರ) ಎಂಬುದು ಒಂದು ಸಾಮೂಹಿಕ ಹಬ್ಬವೆಂದು ವ್ಯಕ್ತಪಡುತ್ತದೆ. ಈ ಉತ್ಸವದ ಹಿಂದಿನ ದಿನ ಸಾವಿರಾರು ಕೊಡ ನೀರಿನಿಂದ ದೇವಸ್ಥಾನವನ್ನು ತೊಳೆದು ಶುಭ್ರಗೊಳಿಸಿ ಆದಿನ ಸಂಜೆ ಅಡುಗೆಗೆ ಪ್ರಾರಂಭಿಸುತ್ತಾರೆ. ಮಾರನೆಯ ದಿನ ದೇವರ ಉತ್ಸವಾದಿಗಳೆಲ್ಲ ಮುಗಿದ ಮೇಲೆ ಆ ಊರಿನ ಮತ್ತು ಬೇರೆ ಊರಿನ ಜನಗಳಿಗೆ ದೇವಸ್ಥಾನದ ಅಂಗಳದಲ್ಲಿ ಊಟಕ್ಕೆ ಹಾಕುತ್ತಾರೆ.[49] ಐಂದ್ರ(ಯಿಂದ್ರ) + ಪರ್ವವೆಂದರೆ ತೀರ್ಥಂಕರನ ಜನ್ಮಾಭಿಷೇಕವಾದ ಮೇಲೆ ದೇವೇಂದ್ರನು ಮಾಡುವ ಆನಂದ ನೃತ್ಯ + ಹಬ್ಬವೆಂತಲೂ ಹೇಳಿದೆ.[50] ಮಹಾಭಾರತದಲ್ಲಿ ಬರುವಂತೆ, ಇದು ಅರಣಿಪೂಜೆಯ ಸಂದರ್ಭದಲ್ಲಿ ನಡೆಯುವ ಹಬ್ಬ,

ಧರ್ಮಕಾರ್ಯಾಸಕ್ತನಾದ ಪೆರುಮಾಳೆದೇವನು ತಾನು ಮಾಡಿದ ಪುರದ ಗೋಪಾಲಕೃಷ್ಣ ದೇವರಿಗೆ ಇಲ್ಲಿಯ ಬ್ರಹ್ಮಪುರಿಯ ಬ್ರಾಹ್ಮಣರ ನೆರವಿನಿಂದ ಇಂತಹ ಉತ್ಸವವನ್ನು ಏರ್ಪಡಿಸಿದುದು ಇದರಿಂದ ಸ್ಪಷ್ಟಪಡುತ್ತದೆ. ಈ ಪಂಚಕೇಶ್ವರದ ಯಿಂದ್ರಪರ್ವ್ವದ ಧರ್ಮಕ್ಕಾಗಿ ಈತನು ದಾನವಾಗಿ ನೀಡಿದ ಭೂಮಿಯು ಪೆರುಮಾಳೆಪುರದ ಬ್ರಾಹ್ಮಣರಿಗೆ • ಬಿಟ್ಟುಕೊಟ್ಟ ಕ್ಷೇತ್ರಕ್ಕೆ ಹೊಂದಿಕೊಂಡಂತೆಯೇ ಇದ್ದಿತೆಂಬುದು ತಿಳಿಯುತ್ತದೆ ; ಈಚೆಗೆ ಬೆಳಕಿಗೆ ಬಂದ ಕಲ್ಲುಬರಹವು ಅದನ್ನು ಸಮರ್ಥಿಸುತ್ತದೆ.

ಪೆರುಮಾಳೆಸಮುದ್ರ : ಪೆರುಮಾಳೆದೇವನು ತನ್ನ ಅಧಿಕಾರದ ಅವಧಿಯಲ್ಲಿ ಚಿತ್ರದುರ್ಗ ಪರಿಸರದಲ್ಲಿ ಕೈಗೊಂಡ ಜನೋಪಕಾರಿ ಕೆಲಸಗಳಲ್ಲಿ ಕೆರೆಯ ನಿರ್ಮಾಣ ಮುಖ್ಯವಾದುದು. ಪೂರ್ವದಲ್ಲೆ ಇದ್ದ ಕುರುಬರ ಕಾಳೆಯನ ಕೆರೆಯನ್ನು ಕ್ರಯಕ್ಕೆ ಕೊಂಡು ಪೆರುಮಾಳೆದೇವನು ತನ್ನ ಹೆಸರಿನಲ್ಲಿ 'ಪೆರುಮಾಳೆಸಮುದ್ರ'ವೆಂದು ಹೊಸದಾಗಿ ಕಟ್ಟಿಸಿ, ಆ ಕೆರೆಯ ವ್ಯಾಪ್ತಿಗೊಳಪಡುವ ಭೂಮಿಯನ್ನು ವಿಂಗಡಿಸಿ ಬ್ರಹ್ಮಪುರಿಯ ಬ್ರಾಹ್ಮಣರಿಗೆ ಕೊಟ್ಟ ಸಂಗತಿಯನ್ನು ಮೇಲೆಯೇ ಪ್ರಸ್ತಾಪಿಸಿದೆ.[51]

---

45 *EC*., VII (NS), Nagamangala 74

46 *Ibid*., Malavalli 102

47 *MAR*., 1927, pp. 133-134 ; ಎಂ. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೬೬, ಪು. ೧೯೪

48 *EC*., V, Belur 101, c 13th Century

49 ಕಶಾಸಾಂಅ., ಪು. ೧೯೪

50 ತ. ಸು. ಶಾಮರಾಯ, ಪ. ನಾಗರಾಜಯ್ಯ (ಸಂ.) : ಜೈನ ಪರಿಭಾಷಾ ರತ್ನಕೋಶ, ಬೆಂಗಳೂರು, ೧೯೮೧, ಪು. ೬೧, ೧೬೪

51 ಹಾಸನ ಜಿಲ್ಲೆಯ ಹಾನುಗಲ್ಲಿನ ಚೋಳೇಶ್ವರ ದೇವಾಲಯದ ಮುಂದಿರುವ ಕ್ರಿ.ಶ. ೧೨೮೦ರ ಶಾಸನವು, ಪೆರುಮಾಳೆದೇವನು ಚಿತ್ರದುರ್ಗದಲ್ಲಿ ತನ್ನ ಹೆಸರಿನಲ್ಲಿ ಕೆರೆಯನ್ನು ಮಾಡಿಸುವ ಮೊದಲೇ ಆತನು ಧರ್ಮಪೂರ್ವಕವಾಗಿ ಮಾಡಿಸಿದ ಹಾನುಗಲ್ಲಿನ ಕೆರೆಯನ್ನು ಸಹಾ 'ಪಿ(ಪೆ)ರುಮಾಳಸಮುದ್ರ'ವೆಂದೇ ಕರೆಯಲಾದ ಬಗೆಗೆ ತಿಳಿಸುತ್ತದೆ — *MAR*., 1924, pp. 24-26.

ಶಾಸನದಲ್ಲಿ (ಚಿ. ೧೨) 'ಚತುಸ್ಸೀಮೆಯಲು ನಾಡುನಟ್ಟು ಕೊಟ್ಟ ಕಲ್ಲುಗಳಿಂದೊಳಗಣ ಕ್ಷೇತ್ರವನೂ' ಗುರುತಿಸಿ ಈ ಕೆರೆಯ ನೆಲೆಯನ್ನು ನಿರ್ದೇಶಿಸಿದೆ. ಆದರೆ ಪ್ರಸ್ತುತ ಭೌಗೋಳಿಕ ಪರಿಸರವು ಬಹಳಷ್ಟು ಬದಲಾಗಿ ಹೋಗಿರುವ ಕಾರಣ ಈ ಎಲ್ಲೆಯನ್ನು ಮರುನಿರ್ಧರಿಸುವುದು ತುಸು ಕಷ್ಟದಾಯಕವಾದರೂ ಈ ಪರಿಸರದ ಒಂದೆರಡು ಎಡೆಗಳನ್ನು ಗುರುತಿಸಬಹುದು. ಇವೆಲ್ಲವೂ ಸರಿಸುಮಾರಾಗಿ ಚಿತ್ರದುರ್ಗ ಪರಿಸರದ ಕೆಳಗೋಟೆ, ಗೋಪಾಲಪುರ, ಪಿಳ್ಳೇಕೆರೇನಹಳ್ಳಿ, ಮೇದೇಹಳ್ಳಿ ಮೊದಲಾದ ಭಾಗಗಳ ವ್ಯಾಪ್ತಿಯಲ್ಲಿ ಬರುವಂತಹವು. ಮೇಲೆಯೇ ಪ್ರಸ್ತಾಪಿಸಿರುವ, ಪೆರುಮಾಳಿದೇವನು ಹಾಕಿಸಿದ 'ಹೂಲಿಯಬಾವಿ'ಯ ಉಲ್ಲೇಖವನ್ನೊಳಗೊಂಡ ಅಕ್ಷರಕಲ್ಲು ಗೋಪಾಲಪುರ ಮತ್ತು ಮೇದೇಹಳ್ಳಿಗಳ ನಡುವಿನ ಗಡಿಯಲ್ಲಿ ಸ್ಥಾಪಿಸಲ್ಪಟ್ಟಿರುವುದರಿಂದ ಹಾಗೂ ಶಂಖ–ಚಕ್ರವುಳ್ಳ ವಾಮನಮುದ್ರೆಯ ಕಲ್ಲು ಸಹಾ ಇದೇ ಸಾಲಿನಲ್ಲಿ ನಿಂತಿರುವುದರಿಂದ, ಬ್ರಹ್ಮಪುರಿಯ ಬ್ರಾಹ್ಮಣರಿಗೆ ಕೊಟ್ಟ ಕ್ಷೇತ್ರವು ಇದೇ ಆಗಿದ್ದು, ಈ ಕಲ್ಲುಗಳು ಕ್ಷೇತ್ರದ ಎಲ್ಲೆಯನ್ನು ತೋರಿಸುವಂತಹವೆಂದು ತಿಳಿಯಬಹುದಾಗಿದೆ.

ಚಿತ್ರದುರ್ಗ ಬೆಟ್ಟದ ಉತ್ತರದಿಕ್ಕಿಗಿದ್ದು, ಈಗಾಗಲೇ ನಗರದ ವ್ಯಾಪ್ತಿಗೊಳಪಟ್ಟಿರುವ ಬರ(ರಿ)ಗೆರೆಯೇ ಪೆರುಮಾಳಿಸಮುದ್ರವೆಂದು ಈಚೆಗೆ ಬೆಳಕಿಗೆ ಬಂದ ಕಲ್ಲುಬರಹವನ್ನಾಧರಿಸಿ ಹೇಳಿದೆ. ಈ ಸಂಬಂಧದಲ್ಲಿ ಕುರುಬರ ಕಾಳಿಯನ ಕೆರೆಯ ಮೂಲನೆಲೆಯನ್ನು ನಿರ್ಧರಿಸಬೇಕಾದುದು ಅಗತ್ಯ. ಪೆರುಮಾಳಿಸಮುದ್ರವನ್ನು ಮೂಲಜಲಾಶಯವೆಂದು ಭಾವಿಸುವುದಾದರೆ ಬ್ರಾಹ್ಮಣರಿಗೆ ಕೊಟ್ಟ ಗದ್ದೆಗಳ ಪ್ರದೇಶಕ್ಕೆ ಈ ಕೆರೆಯಿಂದ ನೀರನ್ನು ಹಾಯಿಸಿಕೊಳ್ಳುತ್ತಿದ್ದ ವ್ಯವಸ್ಥೆಯ ಬಗೆಗೂ ನಿಖರವಾಗಿ ಹೇಳಬೇಕಾಗುವುದು. ಅಲ್ಲದೆ, ಬ್ರಹ್ಮಪುರಿ ಬ್ರಾಹ್ಮಣರ ಗದ್ದೆಗಳ ಪರಿಸರಕ್ಕೂ ಮೇದೇಹಳ್ಳಿ ರಸ್ತೆಯ ಆಂಜನೇಯ ದೇವಾಲಯದ ಬಳಿ ಇರುವ(ಈಗ ಮುಚ್ಚಿಹೋಗಿರುವ) 'ಕರೇಕಲ್ಲುಕಟ್ಟೆ/ಕೆರೆ' ಎಂದು ಕರೆಯಲ್ಪಡುವ ಜಲಾಶಯಕ್ಕೂ ಇದ್ದ ಸಂಬಂಧವನ್ನೂ ಈ ಜಲಾಶಯದ ಕಾಲಮಾನ, ಉದ್ದೇಶ, ಇತ್ಯಾದಿಗಳನ್ನೂ ಅರಿಯಬೇಕು. ಮೂಲ ಜಲಾಶಯದಿಂದ ಹಾಯಿಸಿದ ನೀರನ್ನು ಈ ಕೆರೆಯಲ್ಲಿ ಸಂಗ್ರಹಿಸಿ ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದಿರಬಹುದೇ ಅಥವಾ ಇದೇ ಪ್ರತ್ಯೇಕವಾದ ಜಲಾಶಯವಾಗಿದ್ದಿರಬಹುದೇ ಎಂಬುದನ್ನೂ ಗಮನಿಸಬೇಕು.

ಹೊಯ್ಸಳ ವೀರಬಲ್ಲಾಳನ ಅವಧಿಯಲ್ಲಿ ಚಿತ್ರದುರ್ಗದ ರಾಜ ಪ್ರತಿನಿಧಿಯಾಗಿ ನೇಮಕಗೊಂಡಿದ್ದ ಹಿರಿಯ ಬಲ್ಲಪ್ಪದಣ್ಣಾಯಕನು ಹಾಕಿಸಿದ ಕ್ರಿ. ಶ. ೧೩೩೮ರ ಶಾಸನದಲ್ಲಿ (ಚಿ. ೬), ಸಿಂಗಪುರ ಮತ್ತು ಗೊನೂರು[52]ಗಳೊಡನೆ 'ಪೆರುಮಾಳಿಸಮುದ್ರದ ಮಹಾಜನಂಗಳು' ಎಂತಲೂ ಪ್ರಸ್ತಾಪಿಸಿದ್ದು, ಇಲ್ಲಿ ಅದು ಸ್ಥಳವಾಚಿಯಾಗಿದೆ. ಅದರ ಕಾಲಮಾನ ಮತ್ತು ನಿಶ್ಚಿತ ನೆಲೆಯನ್ನು ಖಚಿತಪಡಿಸಬೇಕಿದೆ.

* * *

ಪೆರುಮಾಳಿಪುರದ ಮರುಶೋಧನೆಯಲ್ಲಿ ಈ ಕೆಳಗಿನಂತೆ ಕೆಲವು ಮುಖ್ಯಾಂಶಗಳನ್ನು ಪ್ರಸ್ತಾಪಿಸಬಹುದು :

೧. ಪೆರುಮಾಳಿಪುರವು ಶ್ರೀವೈಷ್ಣವ–ವೈಷ್ಣವ ನೆಲೆಯಾಗಿದ್ದಿತು; ಗೋಪಾಲಕೃಷ್ಣ ದೇವಾಲಯವು ಈ ಪುರದ ಮುಖ್ಯ ಭಾಗವೆನಿಸಿದ್ದಿತು. ಗೋಪಾಲದೇವರು ಪೆರುಮಾಳಿದೇವನ ಅವಧಿಯಲ್ಲೇ ಸ್ಥಾಪಿಸಲ್ಪಟ್ಟಿರಬಹುದು.[53]

---

52 ಪ್ರಕಟಿತ ಪಾಠದಲ್ಲಿ 'ಗೊರೂರು' ಎಂದು ತಪ್ಪಾಗಿ ಉಲ್ಲೇಖಿಸಲ್ಪಟ್ಟಿದೆ.

53 ಪೆರುಮಾಳಿದೇವನ ಪುತ್ರನೂ ಶೂರನೂ ನಿಷ್ಠಾವಂತ ವೈಷ್ಣವನೂ ಆಗಿದ್ದ ಮಾಧವದಣ್ಣಾಯಕನು ಮುಮ್ಮಡಿ ಬಲ್ಲಾಳನ ರಾಜಪ್ರತಿನಿಧಿಯಾಗಿ ಮೈಸೂರು ಜಿಲ್ಲೆ, ಗುಂಡ್ಲುಪೇಟೆ ತಾಲ್ಲೂಕಿನ ತೆರಕಣಾಂಬಿ ರಾಜಧಾನಿಯಲ್ಲಿರುವಾಗ, ಗೋವರ್ಧನಗಿರಿ(ಈಗಿನ ಗೋಪಾಲಸ್ವಾಮಿಬೆಟ್ಟ)ಯಲ್ಲಿ ಗೋಪಿನಾಥ ದೇವರನ್ನು ಪ್ರತಿಷ್ಠಾಪಿಸಿದ ಸಂಗತಿ ಇಲ್ಲಿ ಉಲ್ಲೇಖನೀಯ— ನೋಡಿ : *MAR*., 1907, p. 25.

೨. ಈ ಪುರದ ವಿಸ್ತರಣವು ಉತ್ತರದಿಕ್ಕಿನ ಗರುಡಾಂಜನೇಯ ಬಾಗಿಲಿನಿಂದ ದೇವಾಲಯ ಪರಿಸರ, ಗೋಪಾಲಸ್ವಾಮಿ ಹೊಂಡ, ಶೃಂಗಾರತೋಟ ಹಾಗೂ ಅರಮನೆ ಆವರಣಗಳ ವಿಶಾಲವ್ಯಾಪ್ತಿಯನ್ನು (ಇಡೀ ಕಣಿವೆಯ ಭಾಗವನ್ನು) ಒಳಗೊಂಡಿದ್ದಿತು.

೩. ಪುರದ ಪ್ರತ್ಯೇಕ ಭಾಗವಾಗಿ ಬ್ರಹ್ಮಪುರಿ ಗೇರಿಯಿದ್ದು, ಆದರ ನೆಲೆಯು ಈಗಿನ ಅರಮನೆ ಆವರಣವಾಗಿದ್ದಿತು.

೪. ಪೆರುಮಾಳಿದೇವನು ಎಲ್ಲ ದತ್ತಿ-ದಾನ ಗಳನ್ನೂ ಬ್ರಹ್ಮಪುರಿಯ ಸ್ಥಾಪನೆಯನ್ನೂ ಒಂದೇ ವರುಷದಲ್ಲಿ, ಅಂದರೆ ಕ್ರಿ.ಶ. ೧೨೮೬ರಲ್ಲಿ ನೆರವೇರಿಸಿರು ವುದು ವ್ಯಕ್ತಪಡುತ್ತದೆ.

೫. ಪುರ ಮತ್ತು ಬ್ರಹ್ಮಪುರಿಗೇರಿಗಳ ಮಧ್ಯೆ ಗೋಪಾಲಸ್ವಾಮಿ ಹೊಂಡಕ್ಕೆ ಹೊಂದಿಕೊಂಡಂತೆ ಶೃಂಗಾರತೋಟವು ಇದ್ದು, ಅದು ಗೋಪಾಲದೇವರ ನಿತ್ಯ ಪೂಜೋತ್ಸವಾದಿಗಳಿಗೆ ಮೀಸಲಿಟ್ಟ ಹೂದೋಟ ವಾಗಿತ್ತು ; ನಾಯಕ ಅರಸರ ಅವಧಿಯಲ್ಲಿ ಅದು 'ಅರ ಮನೆ ತೋಟ'ವಾಗಿ ಪರಿವರ್ತಿತವಾಯಿತು.

೬. ಹುಲಿಯಕೆರೆ, ಹುಲಿಯಗೊಂದಿ ಗಳಂತೆಯೇ ಅದೇ ಹೆಸರಿನಿಂದ ಆರೋಪಿತವಾದುದೆಂದು ತಿಳಿಯಲ್ಪಡುವ ಹುಲಿಯಬಾವಿಯು ಇಂದಿನ ಗೋಪಾಲಸ್ವಾಮಿ ಹೊಂಡವೇ ಆಗಿರಬಹುದು ; ನಾಯಕ ಅರಸರ ಅವಧಿಯಲ್ಲಿ ಇದರ ಉತ್ತರದಿಕ್ಕಿನ ದಂಡೆ(ಕೋಡಿ ಕಟ್ಟೆ)ಯನ್ನು ವಿಸ್ತರಿಸಲಾಯಿತು.

೭. ಪೆರುಮಾಳಿಪುರದ ಬಗೆಗೆ ಇನ್ನೂ ಹೆಚ್ಚಿನ ಶೋಧಕ್ಕೆ ಅವಕಾಶವಿದ್ದು, ಗೋಪಾಲಕೃಷ್ಣ ದೇವಾ ಲಯ ಪರಿಸರ, ಅರಮನೆ ಆವರಣ ಮೊದಲಾದೆಡೆಗಳಲ್ಲಿ ಭೂಶೋಧನೆ ಕೈಗೊಳ್ಳುವುದಾದಲ್ಲಿ ಈ ದಿಸೆಯಲ್ಲಿ ಖಚಿತ ಬೆಳಕು ಹಾಯಿಸಬಹುದಾಗಿದೆ.*

---

* ಪೆರುಮಾಳಿಪುರದ ಮರುಶೋಧನೆಯ ಕ್ಷೇತ್ರಕಾರ್ಯದಲ್ಲಿ ನನ್ನೊಡನೆ ಉತ್ಸಾಹದಿಂದ ಸಂಚರಿಸಿ ತಮ್ಮ ಶ್ರಮಪೂರ್ಣ ಸಹಕಾರ ನೀಡಿದ ನಮ್ಮ ಸಂಶೋಧನ ತಂಡದ ಸದಸ್ಯರುಗಳಾದ ಲ. ನಾಗರಾಜ ಹೊಯ್ಸಳ, ಭೀ. ಉಮೇಶ್, ಹೆಚ್. ಮಂಜುನಾಥ್, ಹೆಚ್. ಎನ್. ಉಮೇಶ್, ಯು. ವೆಂಕಟಾಚಲಶಾಸ್ತ್ರಿ, ನಾ. ವೆಂಕಟೇಶಭಟ್, ನಾ. ಪ್ರಭಾಕರ್, ಎಂ. ಸಣ್ಣಹುಲಿಯಪ್ಪ, ಕೆ. ಎಂ. ರವಿಶಂಕರ್, ಗುಡಿಹಳ್ಳಿ ನಾಗರಾಜ್, ಮೀರಾಸಾಬಿಹಳ್ಳಿ ಶಿವಣ್ಣ, ಪಿ. ಆರ್. ವೀರಭದ್ರ ನಾಯಕ, ಸಿ. ವೀರನಾಯಕ, ಪಿ. ಮಂಜುನಾಥ ತೆಲಗಾವಿ ಹಾಗೂ ಬೆಂಗಳೂರಿನ ಕೆ. ಎಲ್. ರಾಜಶೇಖರ್ ಅವರುಗಳಿಗೆ ನಾನು ಋಣಿ.